ಾಶನ-೩

ಸಂಸ್ಕೃತ

# ಧಾತು ರೂಪ ಕೋಶ

# —ಸವಿವರಣ

(ಶಾಲೆ-ಕಾಲೇಜುಗಳ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತ)

ಕೆ. ಎಸ್. ಕಣ್ಣನ್

ನ್ಯಾಷನಲ್ ಕಾಲೇಜು, ಬಸವನಗುಡಿ.

ಭಾರತೀ ಪ್ರಕಾಶನ

ಬೆಂಗಳೂರು.

1) ಲಟ್

2) ಲಙ್

3) ಲೋಟ್

4) ವಿಧಿಲಿಙ್

5) ಆಶೀರ್ಲಿಙ್

6) ಲುಟ್

7) ಲೃಟ್

8) ಲೃಙ್

9) ಲಿಟ್

10) ಲುಙ್

ಸಾರ್ವಧಾತುಕ 1)–4)

ಆರ್ಧಧಾತುಕ 5)–10)

|| ಶ್ರೀಃ ||

ಸಂಸ್ಕೃತ

# ಧಾತುರೂಪಕೋಶಃ ಸವಿವರಣ

**ಕೆ. ಎಸ್. ಕಣ್ಣನ್**, ಎಂ.ಎ., ವಿದ್ವಾನ್, ರತ್ನ,
ಸಂಸ್ಕೃತ ವಿಭಾಗ, ನ್ಯಾಷನಲ್ ಕಾಲೇಜು,
ಬೆಂಗಳೂರು–560 004

**ಭಾರತೀ ಪ್ರಕಾಶನ**
ಬೆಂಗಳೂರು

ಪ್ರಕಾಶನ-೩ **Reference Work**

Third in the series of lexicons on verbs—
SAMSKRITA DHATURUPAKOSHA : SAVIVARANA—a lexicon of the meanings and forms of important roots in all the tenses and moods (Lakara-s) in Sanskrit. With detailed notes and quotes,, & numerous indexes and appendixes. Pp. 108+108+xlii.

By K. S. Kannan M.A., Vidwan, Ratna, Bangalore.

Price : Ordinary — Rs. 12/- Copies-1000
Calico — Rs. 30/- Script-Kannada.



First Edition 1983

Lib. Cat. No. P 15 C 35 N 83 ; K 491.2

Printed at Nudi Mudrana and Lipi Mudrana, Bangalore-4.
Published by : BHARATHI PRAKASHANA, 375, Upstairs, 16th A Main, IV T Block, Jayanagar, Bangalore-560 041.

ಧಾತುಕೋಶ ಸರದಲ್ಲಿ ಮಣಿ-೩

**ಸಂಸ್ಕೃತ ಧಾತುರೂಪಕೋಶ : ಸವಿವರಣ**—ಮುಖ್ಯ ಸಂಸ್ಕೃತ ಧಾತುಗಳಿಗೆ ಅರ್ಥ, ದಶಲಕಾರಗಳಲ್ಲಿಯ ರೂಪಗಳು ; ವಿಸ್ತೃತ ಟಿಪ್ಪಣಿ, ಉದ್ಧೃತಿಗಳೊಂದಿಗೆ : ಹಲವಾರು ಅನುಬಂಧ, ಅಕಾರಾದಿಗಳೊಂದಿಗೆ.

ಗ್ರಂಥಕರ್ತ : ಕೆ. ಎಸ್. ಕಣ್ಣನ್, ಎಮ್.ಎ., ವಿದ್ವಾನ್, ರತ್ನ.

ಪುಟಗಳು : 108+108+xlii, ಲಿಪಿ : ಕನ್ನಡ, ಪ್ರತಿಗಳು : ೧೦೦೦

ಬೆಲೆ : ಸಾಧಾರಣ ಪ್ರತಿ–ರೂ. ೧೨/– ಕ್ಯಾಲಿಕೋ ಪ್ರತಿ–ರೂ. ೩೦/–



ಮೊದಲ ಮುದ್ರಣ : 1983

ಗ್ರಂಥಾಲಯ ಸೂಚೀಕರಣ ಸಂಖ್ಯೆ P 15 C 35 N 83 ; K 491.2.

ಮುದ್ರಣ : ನುಡಿ ಮುದ್ರಣ ಮತ್ತು ಲಿಪಿ ಮುದ್ರಣ

ಪ್ರಕಾಶನ : **ಭಾರತೀ ಪ್ರಕಾಶನ,** 375 ಮಹಡಿ, 16ನೇ A ಮೇನ್, 4ನೇ ಟಿ ಬ್ಲಾಕ್, ಜಯನಗರ, ಬೆಂಗಳೂರು-560 041

ನನಗೆ

ಸಂಸ್ಕೃತ ವ್ಯಾಕರಣದ ಬಾಲಪಾಠಗಳನ್ನು

—ಗಣಿತವನ್ನು ಹೇಗೋ ಹಾಗೆ—

ಸಿಷ್ಕೃಷ್ಟವಾಗಿ, ಕ್ರಮಬದ್ಧವಾಗಿ ಕಲಿಯುವ
ಹಾದಿ ತೋರಿದ,

ಇಂತಹ ಪುಸ್ತಕದ ರೂಪ-ಸ್ವರೂಪಗಳನ್ನು ಮೆಚ್ಚುತ್ತಿದ್ದ

ನನ್ನ
**ದಿ|| ಪಿತೃವರ್ಯರ**

ಚರಣ ಕಮಲಗಳಲ್ಲಿ

ಸಭಕ್ತಿ

ಸಮರ್ಪಿತ

|| ಧಾತುಪ್ರಸಾದಾತ್

ಮಹಿಮಾನಮಾತ್ಮನಃ ||

# 0.01 ಸಂಕ್ಷಿಪ್ತ ವಿಷಯಸೂಚಿ

## ಈ ಪುಸ್ತಕದಲ್ಲಿ ಬಳಸಲಾಗಿರುವ

## 0.02 ಸಂಕ್ಷೇಪಗಳು (ವೈಷಯಿಕ)

(ಇವೇ ಸಂಕ್ಷೇಪಗಳ ಅಕಾರಾದಿಯನ್ನು 3.522ರಲ್ಲಿ ಕಾಣಬಹುದು)

### (೧) ಅಕ್ಷರಗಳು

(i) ಧಾತುವಿನ 'ಪದ'ಗಳು

ಪ.—ಪರಸ್ಮೈಪದ
ಆ.—ಆತ್ಮನೇಪದ
ಉ.—ಉಭಯಪದ

(ii) ಧಾತುವಿನ ಕರ್ಮಿತ್ವ

ಸಕ.—ಸಕರ್ಮಕ
ಅಕ.—ಅಕರ್ಮಕ
ದ್ವಿಕ.—ದ್ವಿಕರ್ಮಕ

(iii) ಧಾತುವಿನ 'ಇಡ್' ವ್ಯವಸ್ಥೆ

ಸೇ.—ಸೇಟ್
ಅ.—ಅನಿಟ್
ವೇ.—ವೇಟ್

(iv) ಮೂರು ಪುರುಷಗಳು

ಪ್ರ.ಪು.—ಪ್ರಥಮ ಪುರುಷ
ಮ.ಪು.—ಮಧ್ಯಮ ಪುರುಷ
ಉ.ಪು.—ಉತ್ತಮ ಪುರುಷ

(v) ಮೂರು ವಚನಗಳು :

ಏ.ವ.—ಏಕವಚನ
ದ್ವಿ.ವ.—ದ್ವಿವಚನ
ಬ.ವ.—ಬಹುವಚನ

(vi) ಉತ್ತರ ಪೀಠಿಕೆಯ ಕೆಲ ಮುಖ್ಯ ಭಾಗಗಳು

ಟಿ.—ಟಿಪ್ಪಣಿ(ಗಳು)
ಕಾ.—ಕಾರಿಕೆ(ಗಳು)
ಕೋ.—ಕೋಷ್ಠಕ(ಗಳು)
ಸೂ.—ಸೂತ್ರ(ಗಳು)
ಅನು.—ಅನುಬಂಧ(ಗಳು)

(vii) ನಿರ್ದೇಶಗಳು

ನೋ.—ನೋಡಿ
ಹೋ.—ಹೋಲಿಸಿ

(viii) ಇನ್ನಿತರ

ಉದಾ.—ಉದಾಹರಣೆ
ಒ.—ಒಟ್ಟು
ಇ.—ಇತ್ಯಾದಿ

## ಸಂಖ್ಯೆಗಳು

**ಧಾತುಗಳ ಹಿಂದೆ** ದಪ್ಪಕ್ಷರಗಳಲ್ಲಿ ಬಂದಿರುವ ಸಂಖ್ಯೆಗಳು **1 2 3** ಇತ್ಯಾದಿ ಧಾತುಗಳ ಕ್ರಮಸಂಖ್ಯೆ

**ಧಾತುಗಳ ಮುಂದೆ** I II ಇತ್ಯಾದಿ ಗಣಸಂಖ್ಯೆ

**ಧಾತುರೂಪಗಳ ಹಿಂದೆ** 1) ರಿಂದ 10) ಸಂಖ್ಯೆಗಳು (ದಶ) ಲಕಾರ ಸಂಖ್ಯೆಗಳು*

**ಧಾತುರೂಪಗಳ ಮುಂದೆ** ಇರುವ ಸಂಖ್ಯೆಗಳು ಮಾದರಿ ಸಂಖ್ಯೆಗಳು.
**ಧಾತುಗಳ ಮೇಲಿನ ಸಂಖ್ಯೆ**ಗಳು ಅದೇ ಧಾತುವು ಮತ್ತೆ ಪಾಠವಾಗಿರುವುದನ್ನು ಸೂಚಿಸುತ್ತದೆ. ಉದಾ. ವಿದ್[1], ವಿದ್[2], ವಿದ್[3]

೧.೧ ಪ್ರಥಮಪುರುಷ ಏಕವಚನ
೧.೨ ಪ್ರಥಮ ಪುರುಷ ದ್ವಿವಚನ ಇ.

ಸೂತ್ರಗಳ ನಿರ್ದೇಶದಲ್ಲಿ 1.3.2 ಎಂದರೆ
ಅಷ್ಟಾಧ್ಯಾಯಿಯ ಮೊದಲನೆಯ ಅಧ್ಯಾಯ
ಮೂರನೆಯ ಪಾದ
ಎರಡನೆಯ ಸೂತ್ರ ಎಂದರ್ಥ.

* ದಶಲಕಾರ ಸಂಖ್ಯೆಗಳು

| | |
|---|---|
| 1) ಲಟ್ | 6) ಲುಟ್ |
| 2) ಲಙ್ | 7) ಲೃಟ್ |
| 3) ಲೋಟ್ | 8) ಲೃಙ್ |
| 4) ವಿಧಿಲಿಙ್ | 9) ಲಿಟ್ |
| 5) ಆಶೀರ್ಲಿಙ್ | 10) ಲುಙ್ |

1) ರಿಂದ 4) ಸಾರ್ವಧಾತುಕ
5) ರಿಂದ 10) ಆರ್ಧಧಾತುಕ

## 0.03 ಪ್ರಕಾಶನದ ಭಾಷಿತ

ನಮ್ಮ ಪ್ರಕಾಶನದ ಮೂರನೆಯ ಪ್ರಕಟಣೆಯಿದು. ನಮ್ಮ ಮೊದಲನೆಯ ಪ್ರಕಟಣೆಯಾದ ಧಾತುರೂಪಕೋಶದ ಪ್ರತಿಗಳೆಲ್ಲಾ ಕೇವಲ ಮೂರೇ ತಿಂಗಳಲ್ಲಿ ಮುಗಿದು ಹೋದುದು ಅದೆಷ್ಟು ಜನಪ್ರಿಯವಾಗಿದೆ ಯೆಂಬುದಕ್ಕೆ ಸಾಕ್ಷಿ. ವಸ್ತುತಃ ಅದರಲ್ಲಿಯ ನಿರೂಪಣೆ ಹೊಸಬಗೆಯದು. ಇಂದಿನವರೆಗೆ ಯಾರೊಬ್ಬರೂ ಈ ಕ್ರಮವನ್ನು ರೂಪಿಸಿಲ್ಲ, ಬಳಸಿಲ್ಲ. ವಿನೂತನವಾದ ವಸ್ತುವಿನ್ಯಾಸವು ಉಪಯೋಗದೃಷ್ಟಿಯಿಂದ ಅನುಕೂಲ ತರವೆನಿಸಿದರೆ ಸಂಸ್ಕೃತ ವಿದ್ಯಾರ್ಥಿ–ವಿದ್ವದ್ವೃಂದವೂ ಹಾರ್ದವಾಗಿ ಸ್ವಾಗ ತಿಸುವುದೆನ್ನುವುದಕ್ಕೆ ಇದೊಂದು ಸಾಕ್ಷಿಯಲ್ಲವೆ ?

ಇದೀಗ ಕೆಲವೇ ದಿನಗಳ ಹಿಂದೆ ಪ್ರಕಟವಾದ ನಮ್ಮ ಎರಡನೆಯ ಪ್ರಕಟಣೆ 'ಲಕಾರಾರ್ಥನಿರೂಪಣಮ್' ಎಂಬ ಕೃತಿಗೂ ಭವ್ಯವಾದ ಸ್ವಾಗತವೇ ಸಿಕ್ಕಿದೆ. ಅದಕ್ಕೆ ಕಾರಣವಾದರೂ ಅಲ್ಲಿಯ ಕ್ರಮಬದ್ಧ ನಿರೂಪಣೆಯೇ ಸರಿ. ಇಂತಹ ನಿರೂಪಣೆಯ ಒಂದು ಉನ್ನತಸ್ತರವನ್ನೇ ನಿಮ್ಮ ಕೈಯಲ್ಲಿರುವ ಈ ಪ್ರಕಟಣೆಯು ಮುಟ್ಟಿದೆಯೆಂದರೆ ಪ್ರಾಯಃ ಅತಿಶಯೋಕ್ತಿಯಾಗಲಾರದು. ಗ್ರಂಥವಿಸ್ತರಭಯದಿಂದ ಕೆಲವಾರು ಅನುಬಂಧ–ಅಕಾರಾದಿಗಳನ್ನು ಕೈಬಿಟ್ಟದ್ದೇವಾದರೂ ಸಹ ಈ ಕೃತಿಯಲ್ಲಿನ ವ್ಯವಸ್ಥಿತವಾದ ವಸ್ತೂಪಪಾದನವನ್ನು ದ್ಯೋತಿಸಲು ಇದರಲ್ಲಿಯ 'ವಿಸ್ತೃತ ವಿಷಯಸೂಚಿ'ಯೊಂದೇ ಸಾಕಾದೀತು.

ನಮ್ಮ ಮತ್ತೂ ಒಂದು ಕೃತಿ 'ಸಂಗ್ರಹ ಕನ್ನಡ–ಸಂಸ್ಕೃತ ಧಾತುಕೋಶ' ಆಗಲೇ ಅಚ್ಚಿನಲ್ಲಿದೆ. ಅದಕ್ಕೂ ಇದೇ ತೆರನಾದ ಸ್ವಾಗತ ದೊರೆಯುವುದೆಂಬ ನಂಬಿಕೆ ನಮಗಿದೆ.

ನಮ್ಮ ಮುಂದಿನ ಪ್ರಕಾಶನಗಳನ್ನು ಕುರಿತಾಗಿ, ಈ ಪುಸ್ತಕದ ಕೊನೆಯಲ್ಲಿರುವ 'ಪ್ರಕಟಣೆ'ಗಳತ್ತ ವಾಚಕರ ಗಮನವನ್ನು ಸೆಳೆದು ವಿರಮಿಸುತ್ತೇವೆ.

ಪ್ರಕಾಶಕರು.

## 0.04 ಮೆಚ್ಚುಗೆ

ಅನ್ವರ್ಥನಾಮಧೇಯದಿಂದ ಅಲಂಕೃತವಾಗಿರುವ ಸಂಸ್ಕೃತ ಭಾಷೆಯನ್ನು ಅಭ್ಯಾಸಮಾಡುವ ರುಚಿಯು ವಿದ್ಯಾಪ್ರೇಮಿಗಳಲ್ಲಿ ಅಭಿವೃದ್ಧಿ ಹೊಂದುತ್ತಿದೆ. ಅವರ ಈ ಸಾಧನೆಗೆ ಸಹಾಯ ಮಾಡಲು ಸಂಸ್ಕೃತದಲ್ಲಿ ಸರಳವಾದ ಸಾಹಿತ್ಯದ ವಾಙ್ಮಯದಂತೆಯೇ ವೈಜ್ಞಾನಿಕ ವಿಧಾನದಿಂದ ರಚಿತವಾಗಿರುವ ವ್ಯಾಕರಣವಿಭಾಗದ ಗ್ರಂಥಗಳೂ ಅತ್ಯಂತ ಅವಶ್ಯವಾಗಿವೆ. ಇವುಗಳಲ್ಲಿ ಎರಡನೆಯ ವಿಭಾಗಕ್ಕೆ ಸೇರಿದ ಒಂದು ಶ್ರೇಷ್ಠವಾದ ಕೃತಿ ನನ್ನ ಕಿರಿಯ ಮಿತ್ರ ಡಾ|| ಕಣ್ಣನ್‌ರವರ ಈ ಸವಿವರಣ ಧಾತುಕೋಶ.

ಸಂಸ್ಕೃತದಲ್ಲಿ ಭಾಷೆಯಲ್ಲಿನ ಉಳಿದ ರೂಪಗಳ ಪರಿಚಯವನ್ನು ಪಡೆಯುವುದು ಸುಲಭವಾಗಿದ್ದರೂ ಧಾತುಗಳ ವಿವಿಧರೂಪಗಳನ್ನು ಗುರುತಿಸುವುದು ಹಾಗೂ ಸಾಧಿಸುವುದು ತುಂಬಾ ತೊಡಕಿನ ವಿಷಯ. ಈ ಸಮಸ್ಯೆಯನ್ನು ಬಗೆಹರಿಸಲು ಧಾತುರೂಪಪ್ರಕಾಶಿಕಾ, ಧಾತುಮಂಜರಿ, ತಿಙಂತರೂಪಾವಳಿ ಮುಂತಾದ ಗ್ರಂಥಗಳು ಪ್ರಯತ್ನ ಮಾಡಿವೆ. ಅವುಗಳಲ್ಲಿ ಕಂಡುಬರುವ ಅನೇಕ ವಿಶೇಷತೆಗಳಿಂದ ಕೂಡಿ ಚಿಕ್ಕದಾಗಿದ್ದರೂ ಚೊಕ್ಕವಾಗಿರುವ ಗ್ರಂಥ ಈ ಧಾತುಕೋಶ.

ವಿಷಯಗಳ ಕ್ರಮಬದ್ಧವಾದ ವರ್ಗೀಕರಣ, ಲಾಘವ ಮತ್ತು ಸ್ಪಷ್ಟತೆ –ಇವು ಈ ಗ್ರಂಥವನ್ನು ಅನ್ಯಾದೃಶವನ್ನಾಗಿ ಮಾಡಿರುವ ಪ್ರಧಾನ ಗುಣಗಳು. ಧಾತುಗಳ ಪಾಠ, ಧಾತ್ವರ್ಥ, ಗಣಪದಾದಿವಿಭಾಗ, ಉಪಸರ್ಗ, ಉಪಪದಗಳ ಪಟ್ಟಿ, ಮಾದರಿಯ ಧಾತುಗಳು, ಮತ್ತು ಸ್ಮೃತಿ ಸಾಧನಗಳಾದ (ಅರ್ಥಸಹಿತ) ಸೂತ್ರಗಳು ಮತ್ತು ಕಾರಿಕೆಗಳು, ಕೋಷ್ಠಕಗಳು, ಅಂಕಿ–ಅಂಶಗಳು, ಧಾತುಪರಿಚಯ ಮತ್ತು ಲಕಾರ ಪರಿಚಯಗಳು–ಇವೆಲ್ಲದರಲ್ಲಿಯೂ ನಿರೂಪಣೆಯಲ್ಲಿ ಒಳ್ಳೆಯ ವಿಶ್ಲೇಷಣೆಯನ್ನು ಇಲ್ಲಿ ಕಾಣುತ್ತೇವೆ.

ಅನುಬಂಧ ಮತ್ತು ಟಿಪ್ಪಣಿಗಳಲ್ಲಿ ಸಂಕ್ಷೇಪಗುಣ ಮತ್ತು ಸುಬೋಧ್ಯತೆಯ ಗುಣಗಳೂ ಸಮತೂಕವಲ್ಲಿವೆ. ಅಕಾರಾದಿ ಕ್ರಮದಲ್ಲಿ ಪಟ್ಟಿಗಳನ್ನು ಕೊಟ್ಟಿರುವುದು ಅಲ್ಪಕಾಲದಲ್ಲಿ ಅನಾಯಾಸವಾಗಿ ವಿಷಯಬೋಧವನ್ನು ಅಪೇಕ್ಷಿಸುವ ಅಭ್ಯಾಸಿಗಳಿಗೆ ತುಂಬ ಸಹಾಯವಾಗಿದೆ. ವಿವಿದಿಷುಗಳು ಮತ್ತು ವಿದ್ವಾಂಸರು- ಇಬ್ಬರಿಗೂ ಉಪಯೋಗಪಡುವ ಮೌಲ್ಯವತ್ತಾದ ಗ್ರಂಥ. ಎಲ್ಲಾ ವಿದ್ಯಾಸಂಸ್ಥೆಗಳ ಮತ್ತು ವ್ಯಕ್ತಿಗಳ ಗ್ರಂಥಭಂಡಾರ ಗಳನ್ನು ಅಲಂಕರಿಸಲು ಯೋಗ್ಯವಾಗಿರುವ ಈ ಕೃತಿಗೆ ಶಾಸನ ಸತ್ತೆಯಿಂದಲೂ, ಸಾರ್ವಜನಿಕರಿಂದಲೂ ಪುರಸ್ಕಾರವೂ, ಪ್ರೋತ್ಸಾ ಹವೂ ದೊರೆಯಲಿ. ಇದರ ಇಂಗ್ಲೀಷು, ಹಿಂದಿ ಸಂಸ್ಕರಣಗಳೂ ಶೀಘ್ರವಾಗಿಯೇ ಪ್ರಕಾಶಕ್ಕೆ ಬರಲಿ. ಇದರ ಮಾದರಿಯಲ್ಲಿಯೇ ಒಂದು ಕೃದಂತಕೋಶವನ್ನು ರಚಿಸಬೇಕೆಂಬ ಗ್ರಂಥಕಾರರ ಆಶಯವು ಕಾರ್ಯಗತ ವಾಗಲಿ. ವಿದ್ಯಾವ್ಯವಸಾಯದ ಈ ಎಲ್ಲ ಪ್ರಯತ್ನಗಳಿಗೂ ಯಶಸ್ಸು ದೊರೆಯಲಿ—ಎಂದು ನಮ್ಮ ಆಶಂಸೆ.

ಶ್ರೀ ವರದದೇಶಿಕಾಚಾರ್ಯರಂಗಪ್ರಿಯ,
ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು,
ನ್ಯಾಷನಲ್ ಕಾಲೇಜು,
ಬೆಂಗಳೂರು.

## 0.05 ಪ್ರಸ್ತಾವನೆ

ಸಂಸ್ಕೃತ ಭಾಷೆಯಲ್ಲಿರುವ ಶಬ್ದ ಸಂಪತ್ತು ಸಮುದ್ರದಂತೆ ವಿಶಾಲ ವಾದದ್ದು, ಅಗಾಧವಾದದ್ದು. ಈ ಶಬ್ದಗಳಿಗಿರುವ ಅರ್ಥಾಭಿವ್ಯಕ್ತಿ-ಸಾಮರ್ಥ್ಯ ಅನ್ಯಭಾಷೆಗಳಲ್ಲಿ ದುರ್ಲಭ. ಪ್ರಪಂಚ, ಜಗತ್, ದೇಹ, ಶರೀರ, ಬ್ರಹ್ಮ, ಧರ್ಮ-ಮುಂತಾದ ಪದಗಳ ವ್ಯುತ್ಪತ್ತಿಯನ್ನೂ ಧಾತ್ವರ್ಥವನ್ನೂ ಪರಿಶೀಲಿಸಿದಾಗ ಆ ಪದಾರ್ಥಗಳ ವಸ್ತುಸ್ವಭಾವವನ್ನು ಪದಗಳು ಎಷ್ಟು ಸಮರ್ಥವಾಗಿ ಪ್ರತಿಪಾದಿಸುತ್ತವೆಯೆಂಬುದು ತಿಳಿಯುತ್ತದೆ. ಸಂಸ್ಕೃತದಲ್ಲಿ ಇಂಪಾದ ಮಧುರ ಪದಗಳ ಸಂದೋಹವೂ ಉಂಟು, ಓಜಸ್ವಿಯೂ ಕರ್ಣಕರ್ಕಶವೂ ಆದ ಶಬ್ದಗಳ ಭಂಡಾರವೂ ಉಂಟು. ಯಾರಿಗೆ ಯಾವುದು ಬೇಕೋ ಅದನ್ನು ಯಥೇಚ್ಛವಾಗಿ ಆರಿಸಿಕೊಳ್ಳಬಹುದು. ಪೂರ್ವಜರು ಸಾವಿರಾರು ವರ್ಷಗಳಿಂದ ಕಷ್ಟಪಟ್ಟು ಸಂಪಾದಿಸಿ ಬೆಳೆಸಿದ ವಿಪುಲ ಶಬ್ದರಾಶಿ ನಮಗೆ ಅಗ್ಗವಾಗಿ ದೊರಕಿದೆ. ಇದು ಮಾನವನಿಗೆ ದೇವದತ್ತವಾದ ಭಾಷೆ. ಅಜ್ಞರೂ ಅಸೂಯಾಪರರೂ ದುರಭಿಮಾನಿಗಳೂ ಸಂಸ್ಕೃತವನ್ನು ಎಷ್ಟೇ ದೂರಲಿ, ದೂರಮಾಡಲಿಚ್ಛಿಸಲಿ, ಅದೇನೂ ದೂರವಾಗುವುದಿಲ್ಲ. ಗಾಳಿಯಿಲ್ಲದ ತಾಣ ಇರಬಹುದು, ಸಂಸ್ಕೃತವಿಲ್ಲದ ತಾಣ ಭಾರತದಲ್ಲಿ ಇರದು.

ಈ ಭಾಷೆಯನ್ನು ಕಲಿಯಬೇಕೆಂಬ ಕುತೂಹಲ ನಮ್ಮ ಜನರಲ್ಲಿ ವರ್ಧಿಸುತ್ತಲೇ ಇದೆ. ಭಾಷೆ ಸುಲಭವೆಂದು ಕೆಲವು ಅಭಿಮಾನಿಗಳು ಹೇಳುವುದುಂಟು, ಅದು ಅವರಿಗೆ ಸಂಸ್ಕೃತದಲ್ಲಿರುವ ಪ್ರೀತ್ಯಾದರಗಳನ್ನು ವ್ಯಕ್ತಪಡಿಸುತ್ತದೆ. ವಸ್ತುಸ್ಥಿತಿಯಲ್ಲಿ ಅಭ್ಯಾಸಿಗಳಿಗೆ ಸಂಸ್ಕೃತವನ್ನು ಕಲಿಯುವುದು ಕಠಿಣವೆನ್ನಿಸುವುದು ಸಹಜ. ಶಬ್ದಗಳ ಲಿಂಗವಿಭಾಗ, ಲಿಂಗಾನುಸಾರಿಯಾದ ರೂಪಭೇದ, ನಾಮಪದಗಳ ವಿಭಿನ್ನ ಪ್ರಕ್ರಿಯೆ, ವಿಭಕ್ತಿವ್ಯತ್ಯಯ, ಸಮಾಸ, ಸಮಾಸಾಂತವಿಧಿ, ಕೃತ್ತದ್ಧಿತರೂಪ-

ಮುಂತಾದ ತೊಡಕುಗಳನ್ನು ಸಂಸ್ಕೃತಾಭ್ಯಾಸಿಯು ಎದುರಿಸಬೇಕಾಗುತ್ತದೆ. ಕ್ರಿಯಾಪದಗಳ ವಿಷಯದಲ್ಲಂತೂ ಮುಗ್ಗರಿಸದವರೇ ಇಲ್ಲ. ದಶಗಣಗಳು, ತದನುಸಾರಿ ವಿಕರಣ ಪ್ರತ್ಯಯಗಳು, ಪರಸ್ಮೈಪದ–ಆತ್ಮನೇ ಪದ–ಉಭಯಪದ ಎಂಬ ವಿಭಾಗ, ಸೇಟ್–ಅನಿಟ್ ಎಂಬ ತೊಡಕು–ಇವನ್ನೆದುರಿಸುವುದು ಸುಲಭವಲ್ಲ. ಇವು ಸಾಲವೆಂಬಂತೆ ಹತ್ತು ಲಕಾರಗಳು, ಲುಙ್, ಲಿಟ್‌ಗಳಲ್ಲಿರುವ ವಿಭಿನ್ನ ಪ್ರಕ್ರಿಯೆ ಯಾರಿಗಾದರೂ ಜಟಿಲವೆನಿಸುತ್ತವೆ. ನಿತ್ಯವ್ಯವಹಾರಕ್ಕೆ ಬೇಕಾದ ನುಡಿಯನ್ನು ಸರಳಗೊಳಿಸಲು ಸಾಧ್ಯವೆಂಬುದು ಬೇರೆ ವಿಷಯ.

ತಿಙಂತರೂಪಗಳು ಕಠಿಣವಾದ್ದರಿಂದ ಇದನ್ನು ವಿವರಿಸುವುದಕ್ಕಾಗಿ ಹಲವು ಗ್ರಂಥಗಳು ರಚಿತವಾದವು. ಮಾಧವೀಯಧಾತುವೃತ್ತಿ ವಿಖ್ಯಾತವಾದ ಕೃತಿ. ಧಾತುನಿಷ್ಪನ್ನವಾದ ಕೃದಂತಗಳ ವಿವರಣೆಯೂ ಇದರಲ್ಲಿದೆ. ಈ ಬೃಹದ್ ಗ್ರಂಥ ವಿದ್ವಜ್ಜನಪ್ರಿಯವಾಯಿತು. ಬೃಹದ್ಧಾತುರೂಪಾವಳಿ, ತಿಙಂತಾವಳಿ, ಧಾತುರತ್ನಾವಳಿ, ಧಾತುರೂಪಪ್ರಕಾಶಿಕೆ–ಮೊದಲಾದ ಕೆಲವು ಗ್ರಂಥಗಳನ್ನು ಆಧುನಿಕ ಕಾಲದಲ್ಲಿ ವಿದ್ವಾಂಸರು ರಚಿಸಿದ್ದಾರೆ. ಕ್ರಿಯಾಪದಗಳ ಚಕ್ರವ್ಯೂಹವನ್ನು ಇವು ಆಂಶಿಕವಾಗಿ ಭೇದಿಸಿದರೂ ಗಹನವಾದ ವ್ಯೂಹದೊಳಗೆ ನುಗ್ಗಲಾಗಲಿಲ್ಲ.

ನಮಗೆ ಬೇಕಾಗಿರುವುದು ಬಳಕೆಯಲ್ಲಿರುವ ಪ್ರಸಿದ್ಧಧಾತುಗಳ ಎಲ್ಲ ತಿಙಂತ ರೂಪಗಳು. ಎಲ್ಲ ಪುರುಷವಚನಗಳಲ್ಲಿಯೂ ಅವುಗಳ ನಿರ್ದಿಷ್ಟ ರೂಪಗಳೇನೆಂದು ತಿಳಿಯಬೇಕು. ಏಕವಚನದ ಒಂದು ರೂಪವನ್ನು ಬರೆದು ಉಳಿದವುಗಳನ್ನು ಊಹಿಸಿಕೊಳ್ಳಬೇಕೆಂದು ಕೈಬಿಟ್ಟರೆ ಮಿತಪ್ರಜ್ಞೆಯವರಿಗೆ ಊಹಿಸಿಕೊಳ್ಳಲಾಗುವುದಿಲ್ಲ. ಹಾಗೆಂದು ಎಲ್ಲ ಧಾತುಗಳ ಎಲ್ಲ ರೂಪಗಳನ್ನೂ ಬರೆಯುವುದು ಅತಿವಿಸ್ತಾರವಾಗುವುದರಿಂದ ಶಕ್ಯವಾದ್ದಲ್ಲ. ಆದ್ದರಿಂದ ಆದರ್ಶವಾದ ಒಂದು ರೂಪವನ್ನು ತೋರಿಸಿ

'ಆದರಂತೆ ಇದು' ಎಂದು ಹೇಳುವುದು ಅನಿವಾರ್ಯವಾಗುತ್ತದೆ. ಅಲ್ಲಿಯೇ ಗ್ರಂಥಕರ್ತರ ಬರವಣಿಗೆ ಅಭ್ಯಾಸಿಗಳಿಗೆ ಭ್ರಾಮಕವಾಗಿ ಪರಿಣಮಿಸುತ್ತದೆ. ರುಣದ್ಧಿ–ರುಂಧಃ–ರುಂಧಂತಿ ಎಂದು ರೂಪಗಳನ್ನು ಬರೆದು ಆದರಂತೆ ಭಿದಿರ್–ವಿದಾರಣೇ ಎಂಬ ಧಾತುವಿನ ರೂಪ ಎಂದು ತಿಳಿಸಿದರೆ ವಿದ್ಯಾರ್ಥಿಯು 'ಭಿಣದ್ಧಿ–ಭಿಂಧಃ' ಇತ್ಯಾದಿ ರೂಪಗಳನ್ನು ಉತ್ಪ್ರೇಕ್ಷಿಸಿಕೊಳ್ಳಬಹುದು ! 'ಭಜ' ಧಾತುವಿನ ಲಿಡ್ರೂಪಗಳಲ್ಲಿ 'ಪಪಾಚ' ಎಂಬ ಒಂದು ರೂಪವನ್ನು ಮಾತ್ರ ಬರೆದಿರುತ್ತಾರೆ. ಉಳಿದ ರೂಪಗಳು ಹೇಗೆ ? ವಿದ್ಯಾರ್ಥಿಯು 'ಪಪಚತುಃ, ಪಪಚುಃ' ಎಂಬುದಾಗಿ ಊಹಿಸಿಕೊಂಡರೆ ಅಚ್ಚರಿಯಲ್ಲ. 'ಧ್ವಮ್' ಪ್ರತ್ಯಯ ಕೆಲವೆಡೆ 'ಢ್ವಮ್' ಎಂಬ ರೂಪವನ್ನು ನಿತ್ಯವಾಗಿಯೂ ಕೆಲವೆಡೆ ವಿಕಲ್ಪವಾಗಿಯೂ ಪಡೆಯುತ್ತದೆ. ಕೆಲವು ಧಾತುಗಳಿಗೆ ಲಿಟ್ ಲಕಾರದಲ್ಲಿ ಥ, ವ, ಮ ಪ್ರತ್ಯಯಗಳಿಗೆ ಇಡಾಗಮ ಬರುತ್ತದೆ, ಕೆಲವಕ್ಕೆ ಇಲ್ಲ. ಈ ಕಾರಣಗಳಿಂದ ಆದರ್ಶ ರೂಪಗಳನ್ನು ತೋರಿಸಿ ಕೈಬಿಡುವಾಗ ಗ್ರಂಥಕರ್ತರು ತುಂಬ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ

ಕ್ರಿಯಾಪದಗಳ ಬಳಕೆ ಸುಲಭವಲ್ಲ. ವ್ಯಾಕರಣಶಾಸ್ತ್ರದಲ್ಲಿ ತಕ್ಕಷ್ಟು ಜ್ಞಾನವಿಲ್ಲದಿದ್ದರೆ ಮುಗ್ಗರಿಸುವುದು ನಿಶ್ಚಿತ. ಆದಕ್ಕಾಗಿ ಈಗ ಕೆಲವರು ಸರಳಮಾರ್ಗವೊಂದನ್ನು ಕಂಡುಕೊಂಡಿದ್ದಾರೆ. ತಿಙಂತಗಳಿಗೆ ಬದಲಾಗಿ ಕೃದಂತಗಳನ್ನು ಬಳಸುವುದೇ ಆ ಮಾರ್ಗ. ಪಂಡಿತರೂ ಸಹ ಇದು ನಿಷ್ಕಂಟಕವೆಂದು ಭಾವಿಸಿ ಭಾಷಣದಲ್ಲಿಯೂ ಲೇಖನದಲ್ಲಿಯೂ ಕೃದಂತಗಳನ್ನು ವಿಶೇಷವಾಗಿ ಬಳಸಲಾರಂಭಿಸಿದ್ದಾರೆ. ಇದು ತಪ್ಪೆಂದು ನಮ್ಮ ಅಭಿಪ್ರಾಯವಲ್ಲ. ಆದರೆ 'ಭಾಷಣಂ ಕೃತವಂತಃ, ನಗರಂ ಗತವಂತಃ' ಇತ್ಯಾದಿ ಪ್ರಯೋಗಗಳು ಕಿವಿಗೆ ಹಿತಕರವಲ್ಲ. ತಿಙಂತ ಪದಗಳು ಭಾಷೆಯ ಘನತೆ ಸೌಂದರ್ಯಗಳನ್ನು ಹೆಚ್ಚಿಸುತ್ತವೆ. ತಿಙಂತಗಳ ಜೊತೆಗೆ ಕೃದಂತಗಳ ಹಿತಮಿತವಾದ ಬಳಕೆ ಒಳ್ಳೆಯದು. ಮಲ್ಲಿಗೆಯ ಮಾಲೆಯಲ್ಲಿ ಹಸಿರು

ಬಣ್ಣದ ಮರುಗ ಮಿತವಾಗಿ ಸೇರಿದರೆ ಸುಂದರ. ಭಾಷೆಗೆ ಗಾಂಭೀರ್ಯ ವನ್ನೂ ಒಂದು ಕಾಂತಿ ವಿಶೇಷವನ್ನೂ ಕೊಡತಕ್ಕವು ಕ್ರಿಯಾಪದಗಳು ಮತ್ತು ಅವುಗಳ ವೈಚಿತ್ರ್ಯಗಳು.

ಶ್ರೀ ಕೆ. ಎಸ್. ಕಣ್ಣನ್ ಅವರು ಸಂಸ್ಕೃತ ಭಾಷೆಯಲ್ಲಿ ಉತ್ತಮ ಪಾಂಡಿತ್ಯವನ್ನು ಗಳಿಸಿಕೊಂಡಿದ್ದಾರೆ. ಅವರಿಗೆ ಈ ಕ್ರಿಯಾಪದಗಳ ಮೇಲೆ ಗಮನ ಹರಿದದ್ದು ಸಂಸ್ಕೃತಾಭ್ಯಾಸಿಗಳಿಗೆ ದೊಡ್ಡ ಲಾಭವೇ. ಇದುವ ರೆಗೆ ಉಪಲಬ್ಧವಾದ ಎಲ್ಲ ಧಾತುರೂಪಾವಳಿಗಳನ್ನೂ ಅವರು ಸಂಗ್ರಹಿಸಿ, ಅವುಗಳಲ್ಲಿದ್ದ ಗುಣದೋಷಗಳನ್ನು ಪರಿಶೀಲಿಸಿದ್ದಾರೆ. ಅಭ್ಯಾಸಿಗಳಿಗೆ ಸಂದೇಹ, ಭ್ರಮೆ, ಪ್ರಮಾದಗಳು ಎಲ್ಲೆಲ್ಲಿ ಸಂಭವಿಸುತ್ತವೆಯೆಂಬುದನ್ನು ಪರ್ಯಾಲೋಚಿಸಿ ಈ ಗ್ರಂಥವನ್ನು ರಚಿಸಿದ್ದಾರೆ. ಇದಕ್ಕೆ ಮೊದಲು 'ಸಂಸ್ಕೃತ ಧಾತು ರೂಪ ಕೋಶ' ಎಂಬ ಒಂದು ಚಿಕ್ಕ ಹೊತ್ತಿಗೆ ಯನ್ನು ಪ್ರಾಯೋಗಿಕವಾಗಿ ಪ್ರಕಟಿಸಿದರು. ಇದು ವಿವರಣವನ್ನೊಳ ಗೊಂಡ ಅದರ ವಿಸ್ತೃತ ರೂಪ. ಪ್ರಸಿದ್ಧಗಳೆಂದು ಆಯ್ದುಕೊಂಡಿರುವ ಮುನ್ನೂರ ಅರವತ್ತು ಧಾತುಗಳಿಗೆ ದಶಲಕಾರಗಳಲ್ಲಿಯೂ ನಿಷ್ಪನ್ನರೂಪ ಗಳು ಇಲ್ಲಿ ದೊರೆಯುತ್ತವೆ. ಬಹಳ ಉಪಯುಕ್ತವಾದ ಅನುಬಂಧ, ಟಿಪ್ಪಣಿ–ಮೊದಲಾದವನ್ನು ಸೇರಿಸಲಾಗಿದೆ. ಎಲ್ಲ ದೃಷ್ಟಿಯಿಂದಲೂ ಧಾತು ರೂಪಗಳ ಪರಿಶೀಲನೆ, ಸಂಶ್ಲೇಷಣೆ, ವಿಶ್ಲೇಷಣೆಗಳನ್ನೊಳಗೊಂಡು ನೂತನ ವಿಧಾನದಲ್ಲಿ ರಚಿತವಾದ ಇಂತಹ ಇನ್ನೊಂದು ಗ್ರಂಥವನ್ನು ನಾನು ನೋಡಿಲ್ಲ.

ಇಲ್ಲಿ ತೋರಿಸಿರತಕ್ಕವು ಕರ್ತರಿ ಪ್ರಯೋಗದ ರೂಪಗಳು. ಕರ್ಮಣಿ ಪ್ರಯೋಗ, ಭಾವೇ ಪ್ರಯೋಗದ ರೂಪಗಳೂ ಆವಶ್ಯಕ. ಉಪಸರ್ಗಭೇದ ಅರ್ಥಭೇದಗಳಿಂದಾಗುವ ಆತ್ಮನೇಪದ ಪರಸ್ಮೈಪದ ವ್ಯತ್ಯಯ, ಆ ಸಂದರ್ಭ ದಲ್ಲಿ ನಾಮಪದಗಳಲ್ಲಾಗುವ ವಿಭಕ್ತಿ ವ್ಯತ್ಯಯ–ಇವೂ ತಿಙಂತಗಳಿಗೆ

ಸಂಬಂಧಿಸಿದ ಪ್ರಕ್ರಿಯಾ ಭೇದಗಳೇ. ಸನ್ನಂತ, ಯಙಂತಾದಿಗಳ ರೂಪ ಕೆಲವು ಧಾತುಗಳಿಗಾದರೂ ಬೇಕಾಗುತ್ತದೆ.

ಹಾಗೆಯೇ ಕೃದಂತಗಳಲ್ಲಿಯೂ ಕ್ತ್ವಾ, ತುಮುನ್–ಮುಂತಾದ ಸುಪ್ರಸಿದ್ಧ ಪ್ರತ್ಯಯಗಳು ಸೇರಿದಾಗ ಆಗುವ ರೂಪಭೇದಗಳನ್ನು ತಿಳಿಸುವ ಗ್ರಂಥ ಬರಬೇಕಾದಾಗಿದೆ.

ಇರಲಿ. ಈಗ ಆಗಿರುವ ಕಾರ್ಯಕ್ಕಾಗಿ ಸಂಸ್ಕೃತಾಭಿಮಾನಿಗಳು ಹೆಮ್ಮೆ ಪಡಬೇಕಾಗಿದೆ. ಶ್ರೀ ಕಣ್ಣನ್ ಅವರಿಗೆ ಈ ಗ್ರಂಥವನ್ನು ರಚಿಸುವಾಗ ಎಷ್ಟು ಶ್ರಮವಾಗಿದೆಯೆಂಬುದು ಇದನ್ನು ಸಮಗ್ರವಾಗಿ ಪರಿಶೀಲಿಸಿದರೆ ತಿಳಿದೀತು. ಈ ಪುಸ್ತಕ ದೇವನಾಗರೀ ಲಿಪಿಯಲ್ಲಿ ಮುದ್ರಿತವಾದರೆ ಭಾರತದ ಎಲ್ಲ ಸಂಸ್ಕೃತ ವಿದ್ಯಾರ್ಥಿಗಳಿಗೂ, ವಿದ್ವಾಂಸರಿಗೂ ಮಹೋಪಕಾರ ವಾಗುವುದು ಮತ್ತು ಈ ಧಾತುರೂಪಕೋಶವು ಲೋಕವಿಖ್ಯಾತವಾಗುವುದೆಂದು ನನ್ನ ದೃಢವಿಶ್ವಾಸ.

ನನಗಂತೂ ತುಂಬ ಆನಂದವಾಗಿದೆ. ಗ್ರಂಥಕರ್ತರ ಉತ್ಸಾಹ, ಶ್ರಮ ಅಭಿನಂದನೀಯವಾಗಿದೆ. ಭಗವಂತನು ಶ್ರೀ ಕಣ್ಣನ್‌ರವರಿಗೆ ದೀರ್ಘಾಯುರಾರೋಗ್ಯಭಾಗ್ಯಗಳನ್ನು ಕರುಣಿಸಲೆಂದೂ ಹೀಗೆಯೇ ಸಂಸ್ಕೃತ ಭಾಷಾಸೇವೆ ಅವರಿಂದ ನಡೆಯುತ್ತಿರಲೆಂದೂ ಹಾರೈಸುತ್ತೇನೆ.

ಎನ್. ರಂಗನಾಥಶರ್ಮಾ,<br>
ನಿವೃತ್ತ ವ್ಯಾಕರಣಶಾಸ್ತ್ರ ಪ್ರಾಧ್ಯಾಪಕ,<br>
ಬೆಂಗಳೂರು.

## 0.06 ಲೇಖಕನ ಮಾತು

ಈ ಕೃತಿಯ ಕೊನೆಯಲ್ಲಿ (3.521) ಕೊಟ್ಟಿರುವ 'ಪ್ರಸಕ್ತ ಗ್ರಂಥ ಸೂಚಿ'ಯತ್ತ ಕಣ್ಣು ಹೊರಳಿಸಿದರೆ ಸಾಕು. ಈ ಹಿಂದೆ ಆದೆಷ್ಟು ಧಾತು ಕೋಶಗಳು ಬಂದಿವೆ, ಎಷ್ಟು ಬಗೆಯಾಗಿ ನಿರೂಪಿಸಿವೆ-ಎಂಬುದನ್ನು ಸ್ಥೂಲವಾಗಿ ಅರಿಯಬಹುದು.

ಅವುಗಳ ಗುಣಭಾಗಗಳನ್ನುಳಿಸಿಕೊಂಡು, ನ್ಯೂನತೆಗಳನ್ನು ಪರಿಹರಿಸಿ, ಮತ್ತೂ ಸಂಕ್ಷೇಪ ಆದರೆ ಮತ್ತೂ ಸ್ಫುಟತರವಾದ ನಿರೂಪಣೆಯು ಅಸಾಧ್ಯ ವಲ್ಲವೆಂಬ ಮತಿಯು ನನಗೆ ಉಂಟಾದುದು ನಾನಿನ್ನೂ ವಿದ್ಯಾರ್ಥಿಯಾಗಿ ದ್ದಾಗಲೇ. ಈ ಗ್ರಂಥವನ್ನು ನೋಡಿದವರಿಗೂ ಹಾಗೇ ತೋರಿವಲ್ಲಿ ನಮ್ಮ ಎಣಿಕೆ ಯುಕ್ತ.

ಎಷ್ಟೋ ವರ್ಷಗಳ ಕಾಲ ಓದಿದರೂ ಸಂಸ್ಕೃತವು ಅನೇಕರಿಗೆ ಚೆನ್ನಾಗಿ ಬರದಿರಲು ಪ್ರಧಾನ ಕಾರಣಗಳಲ್ಲೊಂದೆಂದರೆ ಧಾತುರೂಪಗಳ ಬಳಕೆಯನ್ನು ಕಲಿಯಲು ಕ್ರಮಬದ್ಧವಾಗಿ ನಿರೂಪಿಸುವ ಕೃತಿಗಳ ಅಲಭ್ಯತೆ–ಅಭಾವವೂ ಸರಿಯಷ್ಟೆ. ಈ ಕೊರತೆಯನ್ನು ಈ ಕೃತಿಯು ಸ್ವಲ್ಪವಾದರೂ ನೀಗಿಸುತ್ತದೆ.

ಇನ್ನು ಈ ಕೃತಿಯು ಕಲಿಯುವವರಿಗೆನ್ನುವ ಕೃತಿಯೋ (Learner's book) ಅಥವಾ ವಿವಿದಿಷುಗಳಿಗೆ ಒಂದು ಆಧಾರ ಗ್ರಂಥ (Reference work) ಮಾತ್ರವೋ—ಎಂದು ಕೇಳಬಹುದು. ಇದು ಎರಡೂ ಹೌದೆನ್ನುವುದನ್ನು 'ಈ ಪುಸ್ತಕದ ಸ್ವರೂಪ' 'ಈ ಪುಸ್ತಕವನ್ನು ಬಳಸುವ ಬಗೆ' ಗಳಿಂದ ತಿಳಿದುಕೊಳ್ಳಬಹುದು.

ಸಾರಾಂಶವಾಗಿ, ಅರ್ಥಮಾಡಿಕೊಂಡು **ಬುದ್ಧಿ**ಯಲ್ಲಿ ಉಳಿಸಿಕೊಳ್ಳ ಬೇಕಾದ ಭಾಗವು ಪೂರ್ವಪೀಠಿಕೆಯ ಸಣ್ಣ ಅಧ್ಯಾಯ ಹಾಗೂ ಉತ್ತರ ಪೀಠಿಕೆಗಳಲ್ಲಿದೆ. ಇನ್ನು **ಸ್ಮೃತಿ**ಯಲ್ಲಿ ಉಳಿಸಿಕೊಳ್ಳಬೇಕಾದ ಭಾಗವು ಆದರ್ಶಭಾಗ. ಇನ್ನುಳಿದ ದರ್ಶವು ಕೋಶ (Dictionary)ಗಳಂತಿದ್ದು ಗೊತ್ತಿಲ್ಲದ್ದನ್ನು ತಿಳಿಸಿಕೊಡುವ ಮತ್ತು ಸಂಶಯವಿದ್ದೆಡೆ ಪರಿಹರಿಸುವ ಭಾಗವೆಂದು ಸ್ಥೂಲವಾಗಿ ಹೇಳಬಹುದು.

ಈ ತೆರನಾಗಿ ಸರ್ವತೋಮುಖವಾಗಿ ಈ ಕೃತಿಯನ್ನು ವಿದ್ಯಾರ್ಥಿಗಳೂ ವಿದ್ವಾಂಸರೂ ಬಳಸಿಕೊಳ್ಳಲಾಗುವುದಾದರೆ, ಅದಕ್ಕಿಂತಲೂ ಮಿಗಿಲಾದ ಮತ್ತಾವ ಸಂತೋಷವು ಲೇಖಕನಿಗಾದೀತು ?

## 0.07 ಕೃತಜ್ಞತೆಗಳು

ನನ್ನ ಮೊಟ್ಟಮೊದಲ ಕೃತಜ್ಞತೆ ವಿದ್ವಾನ್ ಎನ್. ರಂಗನಾಥ ಶರ್ಮರಿಗೆ ಸಲ್ಲುವುದು. ಅವರ ಪ್ರೋತ್ಸಾಹ, ಚೋದನ–ನೋದನಗಳು, ನನಗೆ ಸಂಶಯ ಬಂದೆಡೆಗಳಲ್ಲಿ ಬೋಧನಗಳು—ಇವುಗಳಿಲ್ಲದಿದ್ದಲ್ಲಿ ಈ ಕೃತಿಯು ಪ್ರಕಟವಾಗುತ್ತಲೇ ಇರಲಿಲ್ಲವೆಂದೇ ಹೇಳಬಹುದು. ಸಂಸ್ಕೃತ ವ್ಯಾಕರಣ ಸಾಗರದಲ್ಲಿ ಈಜಾಡಿದ ಇವರು ಸರಳತೆಯ ಪ್ರಿಯರು. ಸ್ಪಷ್ಟತೆ ನಿಷ್ಕೃಷ್ಟತೆಗಳು (Precision and Accuracy) ಇವರಿಗಿಷ್ಟತಮ. ಎಂತಲೇ ಈ ಕೃತಿಯ ಸಂವಿಧಾನವನ್ನು ಕಂಡಂದೇ—ಸುಮಾರು ಆರು ವರ್ಷಗಳ ಹಿಂದೇ !—ಅದರ ಸೌಲಭ್ಯವನ್ನು ಕ್ಷಣಮಾತ್ರದಲ್ಲಿ ಗುರುತಿಸಿದರು : ನನ್ನಲ್ಲಿ ಧೈರ್ಯವನ್ನು ಮೂಡಿಸಿದರು, ಕಾರ್ಯವನ್ನು ಮಾಡಿಸಿದರು.

ಇದೇ ತೆರನಾದ ಪ್ರೋತ್ಸಾಹವು ನನಗೆ ಸಿಕ್ಕಿದುದು ನನ್ನ ಸೋದರ ಶ್ರೀಮಾನ್ ಸುಂದರರಾಘವನಿಂದ. ವೃತ್ತಿಯಲ್ಲಿ ಇಂಜಿನಿಯರಾದರೂ ಅಪಾರವಾದ ಸಂಸ್ಕೃತಪ್ರೀತಿ, ಈತನಿಗೆ. ಯಾವುದೇ ವಿಷಯವಾಗಲಿ, ಭಾವುಕತೆಗೆ ಪರತಂತ್ರನಾಗಿಬಿಡದೆ, ಹಾಗೆಂದು ಅದರ ಯಥಾರ್ಥವಾದ ಪಾತ್ರವನ್ನು ವಿಗಣಿಸದೆ, ಕಾರ್ಯಕಾರಣಭಾವಗಳ ಮುನ್ನೋಟಹಿನ್ನೋಟಗಳತ್ತ ಗಮನ ಹರಿಸುವ ಪ್ರವೃತ್ತಿ–ಜಾಗೃತಿಗಳನ್ನು ಹೊಂದಿರುವ ಈತನ ಮಹಾಮೇಧೆಯ ಸಂಪರ್ಕದಿಂದಲೇ ನನ್ನಲ್ಲಿಯೂ ಈ ಗುಣಗಳು ಅಣುಮಾತ್ರವಾಗಿಯೇ ಆದರೂ ಪ್ರವೇಶಿಸಿವೆ.

ಈ ಪುಸ್ತಕವೂ ಇದರ ಮುಂದಿನ ಸಂಪುಟಗಳೂ ಸಿದ್ಧವಾಗಲು ಭೂಯಿಷ್ಠವಾಗಿ ಸಹಾಯ ಮಾಡಿದ ವ್ಯಕ್ತಿಯೆಂದರೆ ನನ್ನ ವಿದ್ಯಾರ್ಥಿನಿ ಶ್ರೀಮತಿ ಹೇಮಲತಾ. ಹೀಗೆ ಸಿದ್ಧವಾದ ಕರಡು ಪ್ರತಿಗಳನ್ನು ಅಚ್ಚಿಗೆ ಸಿದ್ಧ ಮಾಡಲು ಸಹಕರಿಸಿದವರು ಶ್ರೀಮತಿ ತ್ರಿಪುರಾ. ಪ್ರಕೃತ ಪುಸ್ತಕವು

ಸಪರಿಷ್ಕಾರವಾಗಿ ಸಿದ್ಧವಾಗಲು ಶ್ರೀಮತಿ ವೈದೇಹಿಯವರೂ ಸಹ ತುಂಬ ಸಹಾಯ ಮಾಡಿದ್ದಾರೆ. ಇವರುಗಳು ನನ್ನೊಡನೆ ಇದಕ್ಕಾಗಿ ವ್ಯಯಿಸಿರುವ ಸಮಯ ಅಪಾರ. ಇವರುಗಳೆಲ್ಲರಿಗೂ ನಾನು ಎಷ್ಟು ಕೃತಜ್ಞನೆಂದು ಹೇಗೆ ಸೂಚಿಸಲಿ ?

ಈ ಪುಸ್ತಕಕ್ಕೆ 'ಮೆಚ್ಚುಗೆ'ಯನ್ನು ಬರೆದುಕೊಟ್ಟಿರುವ ಪೂಜ್ಯ ಶ್ರೀ ಎಚ್. ಎಸ್. ವರದದೇಶಿಕಾಚಾರ್ಯರು ನನ್ನ ಗುರುವರ್ಯರು. ಸಂಸ್ಕೃತ, ಸಂಸ್ಕೃತಿಗಳ ಆಳವನ್ನು ಕಂಡವರವರು. 'ಪಾರಂಗತ'ರು—ಅಕ್ಷರಶಃ. ಸಮ ದರ್ಶಿಗಳಾದ 'ಪಂಡಿತ'ರು–ಮೌಲಿಕಾರ್ಥದಲ್ಲಿಯೂ. ವ್ಯಾಕರಣದ ಪರ ಮಾರ್ಥಕ್ಕನ್ವಯಿಸುವ 'ಸ್ವಲಕ್ಷಣಂ ತು ಯೋ ವೇದ ಸ ವೈಯಾಕರಣ ಸ್ಸ್ಮೃತಃ' ಎನ್ನುವ ಮಟ್ಟದ ವೈಯಾಕರಣರು. ಇಂತಹವರ ಶಂಸನವಲ್ಲವೆ ಗ್ರಾಹ್ಯ ! 'ಪ್ರಾಯಃ ಪ್ರತ್ಯಯಮಾಧತ್ತೇ ಸ್ವಗುಣೇಷೂತ್ತಮಾದರಃ'

ನನ್ನ ಮೊದಲ ಬರಹ ಧಾತುರೂಪಕೋಶಕ್ಕೆ ಅಭಿಪ್ರಾಯವನ್ನು ಬರೆದುಕೊಟ್ಟಿರುವ ವಿದ್ವದ್ವರೇಣ್ಯರಲ್ಲಿ ಸುಪ್ರಸಿದ್ಧರಾದ ಪ್ರೊ|| ಎಸ್. ಕೆ. ರಾಮಚಂದ್ರರಾವ್ ಮತ್ತು ಡಾ|| ಕೆ. ಕೃಷ್ಣಮೂರ್ತಿಗಳು ನಾನು ಕೇಳಿ ದೊಡನೆಯೇ 'ಅಭಿಪ್ರಾಯ'ವನ್ನು ತಮ್ಮ ಹತ್ತು ಹಲವು ಕಾರ್ಯಗಳ ಮಧ್ಯ ದಲ್ಲೂ ಬರೆದುಕೊಟ್ಟಿದ್ದಾರೆ.

ಅಂತೆಯೇ ಮಾನಾರ್ಹರಾದ ಪ್ರೊ|| ಎಸ್. ರಾಮಚಂದ್ರಶಾಸ್ತ್ರಿ, ವಿದ್ವಾನ್ ಡಿ. ಪ್ರಹ್ಲಾದಾಚಾರ್, ವಿದ್ವಾನ್ ಎನ್. ಎಸ್. ವೆಂಕಟನಾಥಾ ಚಾರ್, ಡಾ|| ಶಾನಭಾಗ್–ಇವರುಗಳೂ ಯಥಾಕಾಲದಲ್ಲಿ ಅಭಿಪ್ರಾಯ ಗಳನ್ನು ಕಳುಹಿಸಿಕೊಟ್ಟು ಉಪಕರಿಸಿದ್ದಾರೆ. ಇವರುಗಳ ಅಭಿಪ್ರಾಯಗಳ ಸಂಗ್ರಹವನ್ನು ಈ ಪುಸ್ತಕದ ಕೊನೆಯಲ್ಲಿ ಕಾಣಬಹುದು.

ಇವರುಗಳೆಲ್ಲರಿಗೂ ನಾನು ಋಣಿಯಾಗಿದ್ದೇನೆ.

ನನಗೆ ಉಪಕರಿಸಿರುವ ಇನ್ನೂ ಇತರರಿಗೂ ನನ್ನ ಕೃತಜ್ಞತೆ ಗಳನ್ನು ಸೂಚಿಸಿ ಬಹುಶ್ರಮಪಟ್ಟಾದರೂ ಸಕಾಲಕ್ಕೆ ಮುದ್ರಿಸಿಕೊಟ್ಟ ನನ್ನ ಮಿತ್ರರಿಗೆ ವಂದಿಸಿ ಈ ಎರಡು ಮಾತನ್ನು ಮುಗಿಸುತ್ತೇನೆ.

# 0.08

## ಈ ಪುಸ್ತಕವನ್ನು ಬಳಸುವ ಬಗೆ

ಮುಂದಿನ ವಿಭಾಗವನ್ನೋದಿದವರಿಗೆ ಹೊಸದೇನೂ ಇಲ್ಲಿ ಹೇಳಬೇಕಾದುದಿಲ್ಲವಾದರೂ ಈ ಪುಸ್ತಕದಿಂದ ಬೇಗನೆ ಹೆಚ್ಚು ಪ್ರಯೋಜನ ಪಡೆಯಲು – ಮತ್ತು ವಿದ್ಯಾರ್ಥಿಗಳಿಗೆ ವಿಶೇಷವಾಗಿ – ಈ ಸಂಗ್ರಹ.

**ದರ್ಶಭಾಗ:** ಧಾತುಗಳನ್ನು ಅಕಾರಾದಿಯಾಗಿ ಕೊಟ್ಟಿದೆ.

ಪ್ರತಿ ಧಾತುವಿಗೂ ಗಣ, ಪದ, ಕರ್ಮತ್ವ, ಇಡ್ ವ್ಯವಸ್ಥೆಗಳನ್ನು ಸೂಚಿಸಿ ಮುಖ್ಯಾರ್ಥಗಳನ್ನು ಕೊಟ್ಟಿದೆ.

**(1) ರಿಂದ (10) ಲಕಾರಗಳು** ಸಂಕ್ಷೇಪಗಳಲ್ಲಿ, ಪುಸ್ತಕದ ಒಳರಟ್ಟುಗಳಲ್ಲಿ ಈ ಸಂಖ್ಯೆ-ಲಕಾರಗಳ ಸಂಬಂಧ ಮುದ್ರಿತವಾಗಿದೆ. ಓದುಗರಿಗೆ ಇಲ್ಲಿ ಸೌಲಭ್ಯವಿದೆ.

ಎಲ್ಲ ಲಕಾರಗಳಲ್ಲೂ ರೂಪಗಳನ್ನು ದರ್ಶಭಾಗದಲ್ಲಿ ಕೊಟ್ಟಿರುವುದು ೧.೧ ಮಾತ್ರ. ಮಿಕ್ಕ ರೂಪಗಳನ್ನು ಮಾದರಿ ಸಂಖ್ಯೆಯನ್ನನುಸರಿಸಿ ತಿಳಿಯತಕ್ಕದ್ದು. ಉದಾ: ಜಿಘ್ರತಿ 1 = ಭವತಿ. ಗಾಥಾ 28 = ಭಾಷಿತಾ ಇತ್ಯಾದಿ.

ಮಾದರಿಗಳು ಆದರ್ಶಭಾಗದಲ್ಲಿದೆ. ಅಲ್ಲಿ ರೂಪ ನಡೆಸಲಾಗಿರುವುವನ್ನು ದರ್ಶಭಾಗದಲ್ಲಿ ದಪ್ಪಕ್ಷರಗಳಲ್ಲಿ ಕೊಟ್ಟಿದೆ.

ಲಕಾರಗಳ ಅರ್ಥವಿಶೇಷ – ಅರ್ಥಭೇದಗಳನ್ನರಿಯಲು 'ಲಕಾರಾರ್ಥ ನಿರೂಪಣವು' ಎಂಬ ನಮ್ಮ ಪುಸ್ತಕ ಉಪಯೋಗಿ. ಇಲ್ಲಿಯೂ ಕೋಷ್ಠಕ 3.43 ರಲ್ಲಿ ಸಂಗ್ರಹವಾಗಿ ದೊರೆಯುತ್ತದೆ.

ಹೆಚ್ಚು ವಿಷಯಗಳನ್ನು ಮುಂದಿನ ಪ್ರಕರಣದಿಂದ ತಿಳಿಯಬಹುದು.

# ಈ ಪುಸ್ತಕದ ಸ್ವರೂಪ

## ಸಂಕಲ್ಪಿತ

ಈ ಪುಸ್ತಕದಲ್ಲಿ ಸಂಸ್ಕೃತದ ಮುಖ್ಯ ಧಾತುಗಳ ಪ್ರಧಾನ ವಿವರಗಳು, ಅರ್ಥ, ಲಕಾರ ರೂಪಗಳನ್ನು ಕೊಡಲು ಮುಖ್ಯವಾಗಿ ಉದ್ದೇಶಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ಮತ್ತೂ ಹಲಕೆಲವು ಮುಖ್ಯ ವಿಚಾರಗಳನ್ನು ಕೊಟ್ಟು ಗ್ರಂಥವನ್ನು ಆದಷ್ಟು ಸ್ವಯಂ ಪರಿಪೂರ್ಣವಾಗಿ ಮಾಡಲು ಯತ್ನಿಸಲಾಗಿದೆ.

## ಫಲಿತ

ಆದರೆ ಮುದ್ರಣ ಕಾಲಾವಕಾಶದ ಕೊರತೆ, ಪುಸ್ತಕದ ಬೆಲೆ ಹೆಚ್ಚುವ ಭಯ, ಮುದ್ರಣ ಸಾಧನದಲ್ಲಿ ಹಲಕೆಲವು ಇತಿಮಿತಿಗಳು–ಇವುಗಳಾದಿಯಿಂದಾಗಿ ನಾವು ಸಂಕಲ್ಪಿಸಿದಷ್ಟು ಪರಿಪೂರ್ಣತೆಯನ್ನು ಸಾಧಿಸಲಾಗಲಿಲ್ಲವೆನ್ನಲೇಬೇಕು.

## ಆಕಾರ - ಭಾಷೆ

ಕ್ರೌನ್ ಅಷ್ಟದಳದ ಆಕಾರದಲ್ಲಿ ಸುಮಾರು 200 ಪುಟಗಳಿಗಿಂತಲೂ ಹೆಚ್ಚಿನ ಪರಿಮಾಣದ ಈ ಕೃತಿಯು ಆದ್ಯಂತವಾಗಿ ಕನ್ನಡದಲ್ಲಿ ಬರೆದಿದೆ. ಕನ್ನಡ ಲಿಪಿಯನ್ನೇ ಬಳಸಿ ಕನ್ನಡಿಗರಿಗೆಂದೇ ಬರೆದ ಪುಸ್ತಕವಿದು. ಮುಂದೆ ಹಿಂದಿ, ಇಂಗ್ಲೀಷ್, ಸಂಸ್ಕೃತಗಳಲ್ಲಿಯೂ ಬರಲಿದೆ.

ಇದರಲ್ಲಿ ಪೂರ್ವಪೀಠಿಕೆ, ಕೋಶ, ಉತ್ತರಪೀಠಿಕೆಯೆಂಬ ಮೂರು ಭಾಗಗಳಿವೆ. ಪೂರ್ವಪೀಠಿಕೆ ಉತ್ತರಪೀಠಿಕೆಗಳಲ್ಲಿ ಪರಿಚಯ, ವಿವರಣದ ಮಾತುಗಳಿವೆ. ಕೋಶಭಾಗವು ದರ್ಶ ಆದರ್ಶ ವಿಭಾಗಗಳಲ್ಲಿ ಧಾತು ವಿವರಗಳು, ಅರ್ಥ ಹಾಗೂ ರೂಪಗಳು ಮತ್ತು ಮಾದರಿಗಳನ್ನು ಕ್ರಮವಾಗಿ ನಿರೂಪಿಸುತ್ತವೆ.

## ಪೂರ್ವಪೀಠಿಕೆಗೆ ಪೂರ್ವ

ಈ ಭಾಗದಲ್ಲಿ ಸ್ವಲ್ಪ ವಿಶೇಷವಾಗಿ ಗಮನಿಸಬಹುದೆಂದರೆ ಎರಡು ವಿಷಯ ಸೂಚಿಗಳಿರುವುದು - ಒಂದು ಸಂಕ್ಷಿಪ್ತವಿಷಯಸೂಚಿ ಮತ್ತೊಂದು ವಿಸ್ತೃತ

ವಿಷಯಸೂಚಿ. 'ಈ ಪುಸ್ತಕದ ಸ್ವರೂಪ'ದ ಒಂದು ಪಕ್ಷಿನೋಟವು ಮೊದಲನೆಯದರಲ್ಲಿ ದೊರೆತರೆ, ಎರಡನೆಯದು ವಿಷಯ ನಿರೂಪಣೆಯ ಬಗೆ, ವಿಭಾಗ, ಕ್ರಮ, ಅವಸ್ಥಾನ, ಪರಸ್ಪರ ಸಂಬಂಧಾದಿಗಳನ್ನು ತಿಳಿಸಿಕೊಡುವುದು.

ಇಲ್ಲಿ ಗಮನಿಸಬೇಕಾದ ಮತ್ತೊಂದು ವಿಷಯವೇನೆಂದರೆ ಸಂಕ್ಷೇಪ (Abbreviation) ಗಳನ್ನು ವೈಷಯಿಕಕ್ರಮವೊಂದರಲ್ಲಿ (thematic) ತೋರಿಸಿರುವುದು. ಇದರಿಂದಾಗಿ ಸಂಕ್ಷೇಪಗಳ ರಚನೆ, ಬಳಕೆ, ಸಾಮ್ಯ ವೈಷಮ್ಯಾದಿಗಳನ್ನು ಅರಿಯಲು ಅವಕಾಶವಾಗುವುದು. (ಇದಲ್ಲದೆ ನಿರ್ದಿಷ್ಟವಾದ ಸಂಕ್ಷೇಪವೊಂದರ ವಿವರಣವನ್ನರಿಯಲು ಸುಲಭವಾಗುವಂತೆ ಮತ್ತೊಂದು ಸಂಕ್ಷೇಪಸೂಚಿಯನ್ನು – 3.522 ರಲ್ಲಿ – ಅಕಾರಾದಿಯಾಗಿ ತೋರಿಸಿದೆ) ಸಂಕ್ಷೇಪಗಳಲ್ಲೂ ಅಕ್ಷರಾತ್ಮಕ, ಸಂಖ್ಯಾತ್ಮಕವೆಂಬ, ವಿವಿಧ ಪ್ರದರ್ಶನದ ಸೌಕರ್ಯವನ್ನು ವಾಚಕರು ಗಮನಿಸಬಹುದು.

**ಪೂರ್ವಪೀಠಿಕೆ**

ಧಾತುಗಳನ್ನು ಸಂಬಂಧಿಸಿದ ಹಲವು ಮುಖ್ಯ ವಿಷಯಗಳ ಒಂದು ಪರಿಚಯವನ್ನು ನೀಡುವುದು ಇದರ ಉದ್ದೇಶ. ವಾಚಕರಿಗೆ ಯಾವೊಂದು ವಿಷಯವೂ ಈ ಮೊದಲು ತಿಳಿದಿಲ್ಲವೇನೋ ಎಂಬಂತೆ, ಧಾತುವಿನ ಲಕ್ಷಣದಿಂದಾರಂಭಿಸಿ ಕೃದ್ರೂಪಗಳವರೆಗೂ ಹಲವು ಸಂಬದ್ಧ ವಿಷಯಗಳನ್ನು ಆದಷ್ಟು ಸ್ಫುಟವಾಗಿ, ಸರಳವಾಗಿ ವಿವರಿಸಲು ಯತ್ನಿಸಿದೆ. ಪಾರಿಭಾಷಿಕ ಪದಗಳನ್ನು ಮೊಟ್ಟಮೊದಲು ಬಂದಾಗ ಎದ್ದು ತೋರುವಂತೆ ಮುದ್ರಿಸಿ, ಅವು ನಮ್ಮ ಚಿತ್ತ-ಸ್ಮೃತಿ-ಪತ್ರಗಳಲ್ಲಿ ನಿಚ್ಚಳವಾಗಿ ನಿಲ್ಲುವಂತಾಗಲು ಯತ್ನಿಸಿದೆ.

ಈ ಭಾಗದಲ್ಲಿ ವಿಶಿಷ್ಟ ಪದಗಳ ಮೇಲೆ ನಿರ್ದಿಷ್ಟವಾದ ಸಂಖ್ಯೆಗಳು ಉತ್ತರ ಪೀಠಿಕೆಯ ಟಿಪ್ಪಣಿಗಳಿಗೆ ಒಯ್ಯುತ್ತವೆ. ಅಲ್ಲಿ ಅವಶ್ಯ. ಶಕ್ಯವಿರುವಷ್ಟು ಹೆಚ್ಚಿನ ವಿವರಗಳನ್ನು ಕೊಟ್ಟಿದೆ.

**ಕೋಶ**

ಕೋಶದಲ್ಲಿಯ ದರ್ಶ–ಆದರ್ಶ ವಿಭಾಗಗಳನ್ನು ಮೇಲೆಯೇ ಸೂಚಿಸಿದೆ.

## ದರ್ಶ

ದರ್ಶಭಾಗದಲ್ಲಿ ಮೊದಲನೆಯದಾಗಿ ಮುಖ್ಯವೆನಿಸುವ 360 ಧಾತು ಗಳನ್ನು ತೆಗೆದುಕೊಂಡಿದೆ.

## ಧಾತುಗಳು-ಸಂಖ್ಯಾನ

ಮುಖ್ಯವೆಂದರೆ ಹೇಗೆ? ಪ್ರಧಾನವಾಗಿ ಎರಡು ಬಗೆಯಾಗೆಂದು ನಮ್ಮ ಎಣಿಕೆ. (೧) ನಿತ್ಯ ವ್ಯವಹಾರಕ್ಕೆ ಬೇಕೆನಿಸುವ ಧಾತುಗಳು. (೨) ಕಾವ್ಯಾನು ಸಂಧಾನಕ್ಕೆ ಪೋಷಕವೆನಿಸುವ ಧಾತುಗಳು. ಇವೆರಡನ್ನೂ ಸಮಗ್ರವಾಗಿ ಮತ್ತು ನಿರಪವಾದವಾಗಿ ನಾವು ಮಾಡಿಬಿಟ್ಟಿರುವೆವೆಂಬ ಭ್ರಮೆ ನಮಗಿಲ್ಲ. ಎಷ್ಟಾದರೂ ಈ ಬಗೆಯ ಕೆಲಸವು ಸ್ವಭಾವದಿಂದಲೇ ಸಾಪೇಕ್ಷ (relative) ವೇ ಸರಿ. ಈ ಎಡೆಯಲ್ಲಲ್ಲವೇ ವಾಚಕರ ಸಲಹೆಯು ಭೂಯಿಷ್ಠವಾಗಿ ಅಪೇಕ್ಷಿತವಾಗು ವುದು? ಇದಕ್ಕೆ ಸದಾ ಸುಸ್ವಾಗತ.

## ಕೊಸರು

ಈ ಧಾತುಗಳು, ಸೇರಿಸಬೇಕೆಂದು ಕೆಲವರ ಸಲಹೆ ಇತ್ಯಾದಿಯಿಂದಾಗಿ ಕೊನೆಯಲ್ಲಿ ಸೇರಿಸಲ್ಪಟ್ಟವು. ಆ ಬಗೆಯ ಧಾತುಗಳು ಒಟ್ಟು ಐದು. ಇದರ ಬಗ್ಗೆ ವಾಚಕರು ಗಮನ ವಹಿಸಬೇಕಾಗಿ ಪ್ರಾರ್ಥನೆ.

'ಕೊಸರು'ವಿನ (ಐದು) ಧಾತುಗಳನ್ನು ಒಟ್ಟಾಗಿ ಅಕಾರಾದಿಯಾಗಿಯೇ ಕೊಟ್ಟಿದೆ.

## ಧಾತುಗಳು-ವಿವರಗಳು

ಧಾತುಗಳನ್ನು ಗಣಶಃ ಕೊಡುವುದರ ಬದಲು ಅಕಾರಾದಿಯಾಗಿಯೇ ಕೊಟ್ಟಿದ್ದೇವೆ. ಇದರಿಂದ ಯಾವೊಂದು ಧಾತುವಿನ ಅನ್ವೇಷಣೆ ಸುಗಮವೆನಿ ಸುತ್ತದಷ್ಟೆ. ಪ್ರತಿಯೊಂದು ಧಾತುವಿಗೂ ನಮ್ಮದೇ ಒಂದು ಕ್ರಮಸಂಖ್ಯೆ ಯನ್ನು ನಾವು ಕೊಟ್ಟುಕೊಂಡಿದ್ದೇವೆ. (ಹೀಗೆ 1 ರಿಂದ 360). ಇದಲ್ಲದೆ ವ್ಯಾಕರಣ ನಿಯಮಾನುಸಾರ ವಿಶೇಷವಾಗಿ ಈ ಕೊನೆಯ ಎರಡಂಶ

(ಇಟ್, ಕರ್ಮಿತ್ವ) ಗಳನ್ನು ಎಷ್ಟೋ ಕೋಶಗಳೇ (ಉದಾ: ಇಂಗ್ಲೀಷ್- ಸಂಸ್ಕೃತ ಕೋಶಗಳು)ಕೊಡವು. ಆದರೆ ಇಲ್ಲಿ ಮಾತ್ರ ಅವನ್ನು ಅತ್ಯವಶ್ಯವಾಗಿ ಕೊಡಲಾಗಿದೆ.

**ಧಾತುಗಳು - ಅರ್ಥ**

ಧಾತುಗಳಿಗೆ ಅರ್ಥವನ್ನು ಕೊಡುವುದು ಪ್ರಕೃತ ಕೋಶದ ಮುಖ್ಯ ಉದ್ದೇಶವಾಗಿರಲಿಲ್ಲ. ಆದರೆ ಅರ್ಥವನ್ನೇ ನಿರ್ದೇಶ ಮಾಡದಿದ್ದರೆ ಕೆಲವು ತೊಡಕುಗಳಾಗುವುವು. ಉದಾ: ಕ್ಷಮ್[1],[2], ಪಾ[1],[2], ಮೃಶ್[1],[2], ಯುಜ್[1],[2],[3] – ಇಲ್ಲಿ ಅರ್ಥ ಭೇದ ತಿಳಿಯುವುದು ಅನಿವಾರ್ಯವೆನಿಸುತ್ತದೆ.

ಅಂತೆಯೇ ಅವಶ್ಯವೆನಿಸಿದೆಡೆ ಎಲ್ಲ ಮುಖ್ಯಾರ್ಥಗಳನ್ನೂ ಕೊಟ್ಟಿದೆ. ಉದಾ: ಶಾಸ್.

**ಒಂದೇ ಧಾತು - ಹಲವು ಬಾರಿ.**

ಇಂತಹವುಗಳ ಕ್ರಮಬದ್ಧ ಪಟ್ಟಿಯನ್ನೇ ನಾವು 3.512 ಮತ್ತು 3. 1/3 ಗಳಲ್ಲಿ ಕಾಣಬಹುದು. ಈ ಬಗ್ಗೆ ಪೂರ್ವಪೀಠಿಕೆ, ಟಿಪ್ಪಣಿ, ಕಾರಿಕೆಗಳಲ್ಲಿ ಉಲ್ಲೇಖ, ವಿವರಗಳಿವೆ. ಇದನ್ನು ಹಲವು ಬಗೆಯಾಗಿ ನೋಡಬಹುದು. (೧) ಅರ್ಥ ಬೇರೆ, ಗಣ–ಪದಗಳು ಬೇರೆ, ಧಾತು 'ಒಂದೇ' (ಅರ್ಥಾತ್ ನಿರನುಬಂಧರೂಪದಲ್ಲಿ) ಉದಾ: ವಿದ್[1],[2],[3]. (೨) 'ಪದ'–ಸಮಾನ, ಗಣಾದಿಗಳು, ರೂಪ–ಅರ್ಥಗಳು ಬೇರೆ ಬೇರೆ. ಉದಾ: ಅಸ್[1,2]. (೩) ಪದ ಅರ್ಥಗಳು ಸಮಾನ, ಗಣ-ರೂಪಗಳು ಬೇರೆ. ಉದಾ: ಕ್ರಮ್ (45); (೪) ಅರ್ಥದಲ್ಲಿ ಕರ್ಮಿತ್ವದಲ್ಲಿ ಮಾತ್ರ ವ್ಯತ್ಯಾಸ, ಗಣ-ಪದ-ರೂಪಗಳು ಬೇರೆ. ಉದಾ: ಕ್ಲಿಶ್[1],[2] (52, 53). (೫) ಅರ್ಥ–ಪದ– ಕರ್ಮಿತ್ವಗಳು ಸಮಾನ, ಗಣ–ರೂಪಗಳು ಬೇರೆ. ಉದಾ: ಕ್ಷಮ್[1],[2] (54, 55) (೬) ಕರ್ಮಿತ್ವ ಮತ್ತು (ಆ ಕಾರಣದಿಂದ) ಅರ್ಥದಲ್ಲಿ ಭೇದ, ಮಿಕ್ಕದ್ದೆಲ್ಲ ಸಮಾನ. ಉದಾ: ಜಿ[1],[2] (107, 108). (೭) ಗಣ, ಕರ್ಮಿತ್ವ, ರೂಪಗಳೆಲ್ಲ ಸಮಾನ, ಪದಭೇದ ಮಾತ್ರದಿಂದ ರೂಪಭೇದ. ಉದಾ: ಶಾಸ್[1,2] (306, 307) ಇತ್ಯಾದಿ.

ಇವುಗಳ ರೂಪ ಭೇದಾದಿಗಳನ್ನು ತಿಳಿದುಕೊಳ್ಳಲು ಧಾತುಪಾಠಾದಿಗಳಿಂದಲೂ (ಅವುಗಳಲ್ಲಿಯ ಅನುಬಂಧ ವಿಶೇಷ-ಇತ್ಯಾದಿಗಳಿಂದ) ತಿಳಿದುಕೊಳ್ಳಲಾಗುತ್ತದೆ. (ಈ ಬಗೆಯ ಪ್ರಯೋಜನವನ್ನು ಗಣಿಸಿಯೇ ಪಾಣಿನೀಯ ಧಾತುಪಾಠವನ್ನು ನಾವು ತೆಗೆದುಕೊಂಡಿರುವೆಲ್ಲ ಧಾತುಗಳಿಗೂ 3.503 ರಲ್ಲಿ ಕೊಟ್ಟಿದ್ದೇವೆ.

**ಉಪಸರ್ಗಗಳು**

3.514 ರಲ್ಲಿ ನಾವು ತೋರಿಸಿರುವಂತೆ ಹಲವು ಧಾತುಗಳು ನಿತ್ಯೋಪಸರ್ಗಪೂರ್ವಕವಾಗಿವೆ. ಇವನ್ನೂ ಕೆಲವು ವಿಭಾಗಗಳಾಗಿ ಕಾಣಬಹುದು. (೧) ಉಪಸರ್ಗದ ನಿಮಿತ್ತ ರೂಪದಲ್ಲಿ ಬದಲಾವಣೆಯಾಗುವಂತಹವು. ಉದಾ: ಚನುತಿ-ಆಚಾಮತಿ. (೨) ಹಾಗಾಗದಿರುವುವು. ಮತ್ತೆ ಎರಡು ತೆರನಾಗಿ (೧) ನಿರುಪಸರ್ಗವಾಗಿ ಪ್ರಯೋಗವೇ ಕಾಣದು. ಉದಾ: ಆ+√ದೃ, (೨) ಉಂಟು. ಉದಾ: ಅನ್, ಪ್ರ+√ಅನ್. ಮತ್ತೆ (೧) ಈ ಪುಸ್ತಕದಲ್ಲಿ ಉಪಸರ್ಗಪೂರ್ವಕವಾಗಿಯೇ ಪಠಿತವಾಗಿರುವುದು. ಉದಾ: ನಿ+√ಹ್ನು (೨) ಹಾಗಿಲ್ಲದ್ದು ಉದಾ: (ಪ್ರ+) ಅನ್.

ಇದಲ್ಲದೆ ಅನ್ಯಾನ್ಯ **ಉಪಸರ್ಗಗಳ ಸೇರ್ಪಡೆಯಿಂದಾಗಿ ಪದ ಭೇದ, ರೂಪಭೇದ, ಅರ್ಥ ಭೇದಾದಿಗಳು** ತಲೆದೋರುತ್ತವೆ. ಈ ಬಗ್ಗೆ ಪೂರ್ವಪೀಠಿಕೆ, ಟಿಪ್ಪಣಿಗಳಲ್ಲಿ ಬಂದಿದೆ. **ಅವಾವನ್ನು ನಿರೂಪಿಸುವುದೂ ಈ ಗ್ರಂಥದ ಉದ್ದೇಶವೇ ಆಗಿಲ್ಲ* ಅರ್ಥಗಳನ್ನೇ ಸಮಗ್ರವಾಗಿ ನಿರೂಪಿಸುವುದೂ ಈ ಕೃತಿಯ ಉದ್ದೇಶವಲ್ಲ*** ಪ್ರಯೋಗ-ಉದಾಹರಣೆಗಳನ್ನು ಅಳವಡಿಸುವುದೂ ಈ ಪುಸ್ತಕದ ಯೋಜನೆಗೆ ಸೇರಿಲ್ಲ**

ಹೆಸರೇ ತಿಳಿಸುವಂತೆ ಧಾತುಗಳ ದಶಲಕಾರರೂಪಗಳನ್ನು ತಿಳಿಸುವುದು

---

*ಧಾತ್ವರ್ಥಕೋಶವೆಂದು ಮುಂದೆ ಬರಲಿರುವ ಪುಸ್ತಕವು ಇವೆಲ್ಲವನ್ನೂ ಹೊಂದಿರುವುದಾಗಿರುತ್ತದೆ.

**ಅದು ಮುಂದೆ ಬರಲಿರುವ ಧಾತುಪ್ರಯೋಗಕೋಶಕ್ಕೆ ವಸ್ತುವಾಗಿದೆ.

ಮಾತ್ರವೇ ಈ ಕೃತಿಯ ಮೂಲೋದ್ದೇಶ. ಮತ್ತು ಈ ರೂಪಗಳೂ ಕರ್ತರಿ ಪ್ರಯೋಗದವೇ ವಿನಾ ಕರ್ಮಣಿ/ಭಾವೇ, ಣಿಚ್ ಇತ್ಯಾದಿಯಲ್ಲ*

## ರೂಪಗಳು

ಮೇಲೆ ಹೇಳಿದಂತೆ ನಾವು ಆರಿಸಿರುವ ಎಲ್ಲ ಧಾತುಗಳಿಗೂ ದಶಲಕಾರ ಗಳಲ್ಲಿಯೂ ರೂಪಗಳನ್ನು ಕೊಡುವುದೇ ಈ ಕೃತಿಯ ಮುಖ್ಯೋದ್ದೇಶ. ಈ ದಿಶೆಯಲ್ಲಿಯೇ ನಮ್ಮ ಈ ಪುಸ್ತಕದ ವಿಶೇಷ ಸಾಧನೆಯಾಗಿದೆಯೆಂದು ಹೇಳಿ ದರೆ ತಪ್ಪಾಗಲಾರದು.

ಏಕೆಂದರೆ ಈವರೆಗೆ ಬಂದಿರುವ ಧಾತುರೂಪದ ಕೃತಿಗಳು ಎರಡು ತೆರ ನಾಗಿವೆ 1) ಧಾತುಗಳು ಯಾವತ್ತೂ ರೂಪಗಳನ್ನು ಪೂರ್ಣವಾಗಿ ಕೊಡು ವಂತಹುವು 2) ಇದರಂತೆ ಅದು – ಎಂದು ಮಾದರಿಯತ್ತ ಬೊಟ್ಟು ಮಾಡುವಂತಹವು.

ಇವೆರಡರಲ್ಲೂ ಕೊನೆಗೆ ಕಷ್ಟವೇ ಉಳಿದಂತಾಗಿದೆ. ಏಕೆಂದರೆ ಮೊದಲ ನೆಯ ಕ್ರಮದಲ್ಲಿ ಅದೆಷ್ಟು ಪುಟಗಳು ವ್ಯರ್ಥವಾಗಿ ಹೋಗುತ್ತದೆ ! (–ರೂಪ ಸಾಮ್ಯವಿರುವೆಡೆಯಲ್ಲೂ ವೈಷಮ್ಯವಿದ್ದಾಗ ಹೇಗೋ ಹಾಗೆ ಒಂದೊಂದನ್ನೂ ಬಿಡಿಸಿ ನಿರೂಪಿಸುವುದರಿಂದ). ಎರಡನೆಯ ಕ್ರಮವಂತೂ ವಾಚಕನ ವ್ಯುತ್ಪತ್ತಿ ಯನ್ನೇ ಕೊನೆಗೆ ಅವಲಂಬಿಸುವಂತಾಗಿಬಿಡುತ್ತದೆ. ಸಾಧಾರಣವಾಗಿ ಈ ರೂಪವಂತೆ ಆ ರೂಪವೆನ್ನುವಾಗ ಒಂದು ಲಕಾರದಲ್ಲೋ ಮೊದಮೊದಲಿನ ಕೆಲವು ರೂಪಗಳಲ್ಲೋ ಸಾಮ್ಯವಿದ್ದು ನಂತರ ಬೇರೆಯಾಗಿ ಬಿಡುತ್ತದೆ.** ಏಕೆಂದರೆ ಮುಂದೆ ಆಗುವ ಧ್ವಂ/ಢ್ವಂ ವಿಶೇಷಗಳು, ಣತ್ವ–ಷತ್ವಾದಿ ವಿಶೇಷ ಗಳು – ಇತ್ಯಾದಿ ಭೇದಗಳು ಹಲವಿದ್ದು ಬಿಡುತ್ತವೆ. ವಿಶೇಷ ಕ್ಲೇಶಗಳು ಆರ್ಧಧಾತುಕ ರೂಪಗಳಲ್ಲಿ – ತತ್ರಾಪಿ ಲಿಟ್, ಲುಙ್‌ಗಳಲ್ಲಿ ತೋರುವುದುಂಟು

---

* ಮುಂದೆ ಬರುವ ಸಾಧಿತರೂಪಕೋಶವೆನ್ನುವ ಕೃತಿ ಈ ಕುರಿತಾಗಿಯೇ ಇದೆ.

** ಇಲ್ಲಿ ಎಡವುವ ಬಗೆಯನ್ನು ವಿ॥ ರಂಗನಾಥಶರ್ಮರ ಪ್ರಸ್ತಾಪನೆಯು ಹೃದ್ಯವಾಗಿ ತೋರಿಸಿಕೊಡುತ್ತದೆ.

ಇನ್ನೂ ಕ್ಲೇಶವೆಂದರೆ 'ಸತಾಯಿಸುವಿಕೆ'. ಉದಾ. ಸಹ್ ಧಾತುವಿನ ಯಾವುದೋ ರೂಪಗಳು ದಘ್‌ಧಾತುವಿನಂತೆ ಎನ್ನುವುದು ; ದಘ್ ನೋಡಿದರೆ ದದ್‌ವಿನಂತೆ ಎನ್ನುವುದು. ಅಲ್ಲಿ ಮದ್ ಧಾತುವಿನಂತೆ ಎನ್ನುವುದು-ಇತ್ಯಾದಿ. ಕೊನೆಗೆ ಅದೆಷ್ಟೋ ವ್ಯತ್ಯಾಗಳಾಗಿ ಬಿಟ್ಟಿರುತ್ತವೆ.

ಈ ಎರಡು ಪರಾ ಕೋಟಿ (extremity) ಗಳನ್ನೂ ತೊರೆದು, ಸಂಕ್ಷೇಪ ಸ್ಪಷ್ಟತೆಗಳನ್ನು ಆದಷ್ಟು ಮಟ್ಟಿಗೂ ಗಮನಿಸುವ ಕ್ರಮವೊಂದನ್ನು ಇಲ್ಲಿಯ ಪುಟಗಳಲ್ಲಿ ರೂಪಿಸಲಾಗಿದೆ. ಅದಕ್ಕಾಗಿ ಎಲ್ಲ ಧಾತುಗಳ ದಶಲಕಾರಗಳಲ್ಲಿನ ೧.೧ ರೂಪಗಳನ್ನು ಮಾತ್ರವೇ ಮೊದಲನೆಯದಾಗಿ ದರ್ಶ ಭಾಗದಲ್ಲಿ ಕೊಟ್ಟಿದೆ.

### ದಶಲಕಾರಗಳು

ಇವುಗಳ ಕ್ರಮವು (serial order) ಪುಸ್ತಕದ ಆದ್ಯಂತ ಒಂದೇ ತೆರನಾಗಿದೆ. 1 ರಿಂದ 10 – ಈ ಸಂಖ್ಯೆಗಳು ದಶಲಕಾರಗಳಿಗೆ ಸಂಕೇತ. ಆ ಸಂಕೇತವನ್ನು ಸಂಕ್ಷೇಪಗಳಲ್ಲೂ, ಪುಸ್ತಕದ ರಟ್ಟಿನ ಒಳ ಕವಚಗಳಲ್ಲೂ ಮುದ್ರಿಸಲಾಗಿದೆ. ಲಕಾರಗಳಿಗೆ ಕ್ರಮಸಂಖ್ಯೆ ಕೊಡುವಾಗಲೂ ಕ್ರಮ ವಿಶೇಷ. (particulars Sequence) ಒಂದನ್ನು ರೂಪಿಸಲಾಗಿದೆ.

### ಕ್ರಮ (Sequence)

ಕೇವಲ ಕೋಶವೆಂದಲ್ಲದೆ,ರೂಪಗಳ ಒಂದು ಕ್ರಮಬದ್ಧವಾದ(Methodial) ನಿರೂಪಣೆ (Presentation) ಯಲ್ಲಿ ಇಂತಹವೊಂದು ಕ್ರಮವು ಅಪೇಕ್ಷ್ಯ.

ದಶಲಕಾರಗಳಲ್ಲಿ ಮೊದಲ ನಾಲ್ಕು ಸಾರ್ವಧಾತುಕ (1-4), ಮಿಕ್ಕ ಮುಂದಿನ ಆರು ಆರ್ಧಧಾತುಕ (5-10)

### ಸಾರ್ವಧಾತುಕ

ಅನೇಕ ಪುಸ್ತಕಗಳಲ್ಲಿ ಮೊದಲು ಲಟ್ ಮತ್ತು ಲೋಟ್,ಅನಂತರ ಲಙ್ ವಿಧಿ ಲಿಙ್‌ಗಳನ್ನು ಕೊಡಲಾಗಿದೆ. (ಟಿತ್‌ಗಳು, ಙಿತ್‌ಗಳು ಎಂಬ ಕ್ರಮ

ಕ್ಕೆಂದೋ ಏನೋ). ಆದರೆ ನಾವು ಇದರ ಬದಲಾಗಿ 1) ಲಟ್, 2) ಲಙ್, 3) ಲೋಟ್, 4) ವಿಧಿಲಿಙ್ ಎಂಬ ಕ್ರಮವನ್ನು ಆರಿಸಿದ್ದೇವೆ.

1) ಮತ್ತು 2) ಸಂಖ್ಯೆಗಳು ವರ್ತಮಾನ ಹಾಗೂ ಭೂತಕಾಲಗಳಾಗಿದ್ದು ಬಳಕೆಗೆ ಇವೇ ಬಹು ಉಪಯೋಗವಾಗತಕ್ಕವಾಗಿವೆ. ವಿಶೇಷವಾಗಿ ವಿದ್ಯಾರ್ಥಿಗಳಿಗಂತೂ ಇದುವೆ ಹೆಚ್ಚು ಪ್ರಮಾಣದಲ್ಲಿ ಉಪಯೋಗಕ್ಕೆ ಬರುವುದು.

3) ಮತ್ತು 4) ಲಕಾರಗಳು ಕ್ರಮೇಣ ಲೋಟ್ ಮತ್ತು ವಿಧಿಲಿಙ್. ಇವೆರಡಕ್ಕೂ ಬೇಕಾದಷ್ಟು ಅರ್ಥಸಾಮ್ಯವು ಪ್ರಯೋಗದಲ್ಲಿ ಕಂಡುಬರುವುದನ್ನು ಅನ್ಯತ್ರ* ನಿರೂಪಿಸಿದ್ದೇವೆ. ಎಂತಲೇ ಇವೆರಡನ್ನೂ ಒಂದಾದ ಮೇಲೊಂದು ದೊರೆಯುವಂತೆ ಕೊಟ್ಟಿರುವುದು.

ಅಂತೂ 1) ಮತ್ತು 2) – ಎರಡು ಕಾಲಗಳು
3) ಮತ್ತು 4) –ಎರಡು ಭಾವಗಳು –ಎಂಬ ಔಚಿತ್ಯವೂ ಇಲ್ಲಿದೆ.

**ಆರ್ಧಧಾತುಕ**

ಲಿಙ್ ಲಕಾರದ ಮತ್ತೊಂದು ಪ್ರಭೇದವೇ ಅಶೀರ್ಲಿಙ್ ಎನಿಸಿಕೊಳ್ಳುವ ಕಾರಣ, ವಿಧಿಲಿಙ್ ಆದೊಡನೆ ಇದನ್ನೇ 5)ನೆಯದಾಗಿ ಕೊಟ್ಟಿದ್ದೇವೆ. ರೂಪಗಳಲ್ಲಿ ಇವೆರಡರಲ್ಲಿರುವ ಸಾಮ್ಯ ವೈಷಮ್ಯಗಳನ್ನು ಓದುಗರು ಅರಿಯಲು ಇದರಿಂದ ಸುಲಭವೆನಿಸುತ್ತದೆ.

ಮುಂದಿನೆರಡು ಲಕಾರಗಳು ಭವಿಷ್ಯಲ್ಲಕಾರಗಳು – 6) ಲುಟ್ ಮತ್ತು 7) ಲೃಟ್ ಹೀಗೆ ಅವು ಒಂದರ ಅನಂತರ;ಮತ್ತೊಂದು ಸಿಗುವಂತೆ ಜೋಡಿಸಿದೆ.

ಇನ್ನು ಲೃಟ್-ಲೃಙ್‌ಗಳ ಸಂಬಂಧವು ಲಟ್–ಲಙ್‌ಗಳ ಸಂಬಂಧಕ್ಕೆ

---

*ನೋ. ಲಕಾರಾರ್ಥ–ನಿರೂಪಣಮ್ ಕೆ. ಎಸ್. ಕಣ್ಣನ್, 1984, ಬೆಂಗಳೂರು; ಪುಟಗಳು 7-12; ಇಲ್ಲಿ ಒಟ್ಟು ಇಪ್ಪತ್ತೈದು ಉದಾ.ಗಳಿವೆ.

ಸಮನಾದುದೆನ್ನಬಹುದಷ್ಟೆ; ಈ ಕಾರಣಕ್ಕಾಗಿ ಲೃಙ್‌ಲಕಾರವನ್ನು 8) ನೆಯ ದಾಗಿ ಲೃಟ್‌-ಸಮನಂತರವೇ ಕೊಡಲಾಗಿದೆ.

## ಲೃಟ್ ಮತ್ತು ಲುಙ್

ಇನ್ನುಳಿದೆರಡು ಲಕಾರಗಳೆಂದರೆ ಲಟ್‌,ಲುಙ್‌. ಇಷ್ಟಾಪತ್ತಿಯಾಗಿಯೇ ಇವೆರಡೂ ಒಟ್ಟಿಗೆ ಬಂದಿವೆ. ಎರಡೂ ಭೂತಕಾಲವಾಚಿಯೇ, ರಘುವಂಶ ಮೊದಲಾದ ಮಹಾಕಾವ್ಯಗಳು, ಕಾದಂಬರೀ ಮೊದಲಾದ ಗ್ರಂಥಗಳಲ್ಲಿ ಇವು ಗಳನ್ನೇ ಹೇರಳವಾಗಿ ಕಾಣುತ್ತೇವೆ. ಇನ್ನೂ ಸಂಸ್ಕೃತವನ್ನೂ ವ್ಯವಹಾರಕ್ಕಾಗಿ ಬಳಸುವವರ ಸಂಖ್ಯೆ ಪ್ರತ್ನಕಾವ್ಯರತ್ನಗಳನ್ನೋದುವವರ ಸಂಖ್ಯೆಗಿಂತ ಹೆಚ್ಚಿಲ್ಲ ವೆಂಬ ಕಾರಣ ಇವೆರಡನ್ನು ಕೊನೆಗೆ ಉಳಿಸಿಕೊಂಡಿದೆ.

ಹಲವು ಧಾತುಪುಸ್ತಕಗಳಲ್ಲಿ ಅನುಪಯುಕ್ತವೆಂದು ಲೃಙ್‌ಲಕಾರವನ್ನು ಕೊನೆಗಿರಿಸಿರುವುದುಂಟು. (ಆದರೆ ವ್ಯವಹಾರ ದೃಷ್ಟ್ಯಾ ಇದು ಉಪಯುಕ್ತ ವಾದ ಲಕಾರವೇ ಸರಿ)

ನಾವು ಲಿಟ್ ಲುಙ್‌ಗಳನ್ನು ಕೊನೆಯಲ್ಲಿ ಕೊಡುವ ಕಾರಣ ಮೇಲಿನಂತೆ ಉಪಯೋಗ ಕಡಿಮೆಯೆಂದಲ್ಲ. ಪ್ರತ್ಯುತ ಹೆಚ್ಚೆಂದೇ! ಯಾವುದೇ ಪಟ್ಟಿಯಲ್ಲಿ ಆದ್ಯ, ಅಂತ್ಯ ಪದಗಳನ್ನು ಅರಸುವುದು ಬಳಸುವುದು ಸುಲಭವೆನಿಸೀತೇ ವಿನಾ ಕಷ್ಟವೆನಿಸಲಾರದೆಂದು ನಮ್ಮ ಭಾವನೆ. ಇನ್ನೂ ಮಧ್ಯಗತರೂಪಗಳೇ ಅನ್ವೇಷ್ಯ ವಾಗಿರುವುವು.

ಲೃಙ್ ಲಕಾರದ ಬಳಿಕ ಲುಙ್‌ಲಕಾರವನ್ನೇ ಕೊಡಬಹುದಿತ್ತೇ? ( ಈ ಬಗ್ಗೆ ವಾಚಕರ ಅಭಿಪ್ರಾಯವೇನು?) ಆಕಸ್ಮಾತ್ತಾಗಿಯಾದರೂ ಇವುಗಳಲ್ಲಿ ಪರಸ್ಪರ ಭ್ರಾಂತಿಯಾಗದಿರಲಿ (-ಕಾರಣ, ಎರಡರಲ್ಲೂ ಅಡಾಗಮವಿರುವುದ ರಿಂದ) ಎಂಬುದು ನಮ್ಮ ಪ್ರಸಕ್ತ ಕ್ರಮದ ಆಶಯವಾಗಿದೆ.

## ಮುದ್ರಣಭೇದ

ಇನ್ನೂ ಈ ದಶಲರೂಪಗಳಲ್ಲಿ ಕೆಲಧಾತುಗಳಲ್ಲಿ ಹಲವನ್ನು ಎದ್ದು ಕಾಣು

ವಂತೆ ದಪ್ಪವಾಗಿಯೂ (antique) ಮಿಕ್ಕವನ್ನು ಸಾಧಾರಣವಾಗಿಯೂ ಮುದ್ರಿಸಿದೆ. ಮುಂದೆ ಆದರ್ಶ ಭಾಗದಲ್ಲಿ ಯಾವುದರ ಪುರುಷತ್ರಯವಚನ ತ್ರಯರೂಪಗಳನ್ನೇ ಕೊಡಲಾಗಿದೆಯೋ ಅಂತಹವನ್ನು ಮೊದಲನೆಯ ಬಗೆ ಯಾಗಿಯೂ ಮಿಕ್ಕವನ್ನು ಸಾಧಾರಣವಾಗಿಯೂ ಮುದ್ರಿಸಿದೆ. ಇದರಿಂದಾಗಿ 'ಈ ರೂಪಗಳನ್ನೇ ನಡೆಸಿದೆ,' 'ಇದು ವಿಶಿಷ್ಟ ರೂಪ,' ಅಥವಾ 'ಮಿಕ್ಕ ಕೆಲವಕ್ಕೆ ಇದೊಂದು ಮಾದರಿಯೆನಿಸುವ ಸೌಕರ್ಯವನ್ನು ಹೊಂದಿರುವಂತಹುದು' ಎಂಬು ದಾಗಿಯೂ ಮತ್ತು ಸಾಧಾರಣವಾಗಿರುವಂತಹುದು 'ಇದು ಸರಲ', 'ಮತ್ತೊಂದ ರಂತೆ' ಎಂಬುದಾಗಿಯೂ ಗ್ರಾಹ್ಯ. ಉದಾ. 7ಅಚ್ 9) ಅನರ್ಚ 351 ;

10) ಅರ್ಚೀತ್ 416

141 10) ದಿಶ್ 41 ಅದಿಕ್ಷತ್ 413

ತ 433-ಇ.

**ಉಭಯಪದಿಗಳು**

ಉಭಯಪದಿಗಳಲ್ಲಿ ಅಧಿಕರೂಪಗಳನ್ನು ನಿರ್ದೇಶಿಸಲು ಪರಸ್ಮೈ ಆತ್ಮನೇ ರೂಪಗಳೆರಡನ್ನೂ ಬೇರೆ ಬೇರೆಯಾಗಿ ಪೂರ್ಣವಾಗಿ ಪಠಿಸಿಲ್ಲ. ಸ್ಪಷ್ಟತೆಗೆ ಭಂಗತರದೆ ಅವಕಾಶ (space) ಉಳಿಸಲಾಗುವೆಡೆಗಳಲ್ಲೆಲ್ಲ ಹಾಗೆಯೇ ಮಾಡ ಲೆತ್ನಿಸಿದ್ದೇವೆ. 31 ಕಥ್ 1) ಕಥಯತಿ-ತೇ ಎಂದರೆ ಕಥಯತಿ, ಕಥಯತೇ ಎಂದು ತಿಳಿಯುವುದು.

**ಲಿಟ್**

ಅನುಪ್ರಯೋಗ ಲಿಡ್ರೂಪಗಳ ಬಗ್ಗೆ ಹೇಳಬೇಕಾದುದಿದೆ. 42 ಕ್ಯಾತ್ 9) ಕೀರ್ತಯಾಂಚಕಾರ,- ಚಕ್ರೇ ಇ. ಎಂಬುದನ್ನು ಮೇಲೆ ಹೇಳಿದಂತೆ ಕೀರ್ತ ಯಾಂಚಕಾರ, ಕೀರ್ತಯಾಂಚಕ್ರೇ ಎಂದು ಗ್ರಹಿಸುವುದು. 'ಇ' = ಇತ್ಯಾದಿ ಯು ಇಲ್ಲಿಯ ಇನ್ನಿತರ ಪ್ರಕಾರಗಳನ್ನು ಸೂಚಿಸುತ್ತದೆ. ಅದರಂತೆ ಕೀರ್ತ ಯಾಮಾಸ, ಕೀರ್ತಯಾಂಬಭೂವ ಎಂದು ಮುಂತಾಗಿ ರೂಪಗಳಾಗುವುವು.

ಇಲ್ಲಿ ಕೆಲವೆಡೆ ಮುದ್ರಣ ಸೌಕರ್ಯಕ್ಕಾಗಿ -ಚಕಾರ, -ಚಕ್ರೇಗಳ ಮೊದ ಲಿನ ಗೀಟನ್ನು (hyphen) ಕೈ ಬಿಡಲಾಗಿದೆ. ಅಷ್ಟು ಮಾತ್ರದಿಂದ ಅದನ್ನು ಅಪಾರ್ಥಮಾಡಿಕೊಳ್ಳಬಾರದಾಗಿ ಕೋರಿದೆ.

## ರೂಪವೈಚಿತ್ರ್ಯ

61 ಕ್ಷುಭ್, 257 ರುಚ್ ಮುಂತಾದ ಧಾತುಗಳು ಆತ್ಮನೇಪದ ವಾದರೂ ವಿಶಿಷ್ಟ ಲಕಾರಗಳಲ್ಲಿ ಪರಸ್ಮೈ ಆಗುವುದುಂಟು. ಅಲ್ಲಿ ಅದನ್ನು ಗಮನಿಸಬಹುದು.

## ರೂಪಬಾಹುಲ್ಯ

ರೂಪಗಳಲ್ಲಿ ಅದೆಷ್ಟು ನಿಷ್ಪ್ರಪೃತೆಯುಂಟೋ, ಕೆಲವೆಡೆ ಅಷ್ಟೇ ರೂಪ ಬಾಹುಲ್ಯವಿರುವುದು ಆಶ್ಚರ್ಯಕರವೇ ಸರಿ. ಈ ಪುಸ್ತಕವು ಆ ಅಧಿಕ ರೂಪ ಗಳನ್ನೂ ತೋರಿಸುತ್ತದೆ. ಉದಾ. 211 ಭೀ 4) ರಲ್ಲಿ (ಎರಡು) ; 63 ಖನ್ 5) ರಲ್ಲಿ (ಮೂರು) ; 42 ಕ್ಯಾತ್ 10) ರಲ್ಲಿ (ನಾಲ್ಕು) ; 161 ಧೃಷ್ 10) ರಲ್ಲಿ (ಐದು) ; 98 ಚುರ್ 9) ರಲ್ಲಿ (ಆರು) ; 263 ಲಕ್ಷ್ 9) ರಲ್ಲಿ (ಏಳು) ಹೆಚ್ಚೇಂದರೆ 88 ಚಕ್ಷ್ (ಒಂಭತ್ತು) ! ಇವೊದೊಂದಕ್ಕೂ ಪುರುಷ ತ್ರಯವಚನತ್ರಯರೂಪಗಳೆಂದರೆ ಅದೆಷ್ಟಾಗುವುದು !

ಕೆಲವೊಮ್ಮೆ ರೂಪಬಾಹುಲ್ಯದೆಡೆಗಳಲ್ಲಿ ಅರ್ಥಭೇದಗಳೂ ಸಂಭವಿಸು ವುವು. ಉದಾ. ಅಂಚ್ಯಾತ್, ಅಚ್ಯಾತ್. ಈ ಪುಸ್ತಕವು ಇದನ್ನು ತೋರಿಸು ವುದಿಲ್ಲ

## ರೂಪರಾಹಿತ್ಯ

ಆದರೆ ಅಲ್ಲೊಮ್ಮೆ ಇಲ್ಲೊಮ್ಮೆ ರೂಪಗಳೇ ಇಲ್ಲದಿರುವ ಪ್ರಸಂಗವೂ ಉಂಟು. ಉದಾ. 277 ವಚ್ 1) ವಕ್ತಿ ಇದರ ೧.೩ ಇಲ್ಲ. ಅಂತೆಯೇ 66 ಖ್ಯಾ 5) 6) 7) 8) 9) 10) ಗಳಲ್ಲಿ ರೂಪಗಳೇ ಇಲ್ಲ.

## ಮಾದರಿ ಸಂಖ್ಯೆ

ಹೀಗೆ ದರ್ಶಭಾಗದಲ್ಲಿ ದಶಲಕಾರಗಳಿಗೂ ಕೊಟ್ಟಿರುವ ೧.೧ ರೂಪದ ಬಲಕ್ಕೆ ಒಂದೊಂದು ಮಾದರಿ ಸಂಖ್ಯೆಯನ್ನು ಕೊಡಲಾಗಿದೆ. ಈ ಮಾದರಿ ಯನ್ನನುಸರಿಸಿದರೆ ಉಳಿದೆಲ್ಲ ರೂಪಗಳೂ ದೊರೆಯುವುವು. ಮಾದರಿಗಳನ್ನು ಆದರ್ಶಭಾಗದಲ್ಲಿ ಕ್ರಮಬದ್ಧವಾಗಿ ಕೊಡಲಾಗಿದೆ. ಇದನ್ನು ಮುಂದೆ ತಿಳಿಸುತ್ತೇವೆ.

ಈ ಕೃತಿಯಲ್ಲಿ ಕ್ರಮಬದ್ಧ ನಿರೂಪಣೆಯನ್ನು ಕಾಣಲು ಹೆಜ್ಜೆ ಹೆಜ್ಜೆಗೂ ಧಾತುಸಂಖ್ಯೆಗಳಲ್ಲಿ ಕಾಣುವ ಸಾಮ್ಯ-ಸಾರೂಪ್ಯ (pattern, symmetry) ಗಳನ್ನು ಗಮನಿಸಿ. ಉದಾ.ಗೆ ಸುಲಭಗಣಗಳ ಪರಸ್ಮೈ ಧಾತುಗಳಲ್ಲಿ (–ಅವು ಗಳೇ ಅತ್ಯಂತ ಹೆಚ್ಚು–) 1 ರಿಂದ 8 ಲಕಾರಗಳಿಗೆ ಕ್ರಮವಾಗಿ ಮಾದರಿಗಳೂ 1 ರಿಂದ 8 ಎಂದೇ ಬಹುತ್ರ ಇರುವುದು. ಅಂತೆಯೇ ಆತ್ಮನೇ ಧಾತುಗಳಿಗೆ 11 ರಿಂದ 18 ಎಂಬುದಾಗಿ. ಉಭಯಪದಿಗಳಲ್ಲಿ ಎರಡೆರಡೂ, ಅಂತೆಯೇ ಕ್ಲಿಷ್ಟ ಗಣಗಳಲ್ಲಿಯ ಧಾತುಗಳ ಮಾದರಿಸಂಖ್ಯೆಗಳಲ್ಲೂ ತಮ್ಮದೇ ಆದ ಕ್ರಮ ವಿಶೇಷವಿದೆ.

ಒಟ್ಟಿನಲ್ಲಿ ಮಾದರಿಗಳ ವಿಭಾಗ ವಿಂಗಡಣೆಗಳ ಕ್ರಮಪರಿತಲ್ಲಿ ಕೆಲವೆಡೆ ತೋರುವ ಬದಲಾವಣೆಗಳು, ಹಾಗೂ ಅಲ್ಲಿಯ ಒಂದು ವ್ಯವಸ್ಥೆ–ಇವನ್ನೂ ಕಾಣಬಹುದಾಗಿದೆ. ಇದನ್ನು ವಿಸ್ತರಿಸುವ ಉದ್ದೇಶವಿಲ್ಲ. ಪುಸ್ತಕವನ್ನು ಬಳಕೆ ಮಾಡುತ್ತ ಮಾಡುತ್ತ ಇದು ಸಹಜವಾಗಿಯೇ ವೇದ್ಯವಾಗುವಂತಹುದು.

## ಕೊಸರು

ದರ್ಶಭಾಗದಲ್ಲಿ ಕೊನೆಯದಾದ, ಮತ್ತು ನಾವು ಮತ್ತೊಮ್ಮೆ ಜ್ಞಾಪಿಸುವ ಅಂಶವೆಂದರೆ ಕೊಸರು. ಇದು 356–360 ಸಂಖ್ಯೆಗಳವು. ಇವನ್ನೂ ಅಕಾರಾದಿಯಾಗಿಯೇ ಒಟ್ಟಿಗೆ ಕೊಟ್ಟಿದ್ದೇವೆ. ಇನ್ನು ಮುಂದಕ್ಕೆ ಆದರ್ಶ ಭಾಗ.

## ಮುದ್ರಣ ಕ್ರಮ

ಮುದ್ರಣದಲ್ಲಿ ಟೈಪುಗಳ ಸೌಲಭ್ಯ, ಓದಲು ಕಣ್ಣಿಗೆ ಸುಕರತೆ ಮುಂತಾದುವನ್ನನುಸರಿಸಿ ಅನುನಾಸಿಕ ಸಂಧಿಯೆಡೆಗಳಲ್ಲಿ ಹೆಚ್ಚು ಗಮನ ಕೊಟ್ಟಿಲ್ಲ. ಆದ್ದರಿಂದ ಅಂಚ್ಯಾತ್ ಎಂದಿದೆಯೇ ವಿನಾ ಅಞ್ಚ್ಯಾತ್ ಎಂದಿಲ್ಲ.

## ಪುಟ ಸಂಖ್ಯೆಯಲ್ಲಿ ವಿಶೇಷ

ಮುದ್ರಣವು ನಾನಾ ಕಾರಣಗಳಿಂದ ತ್ವರಿತವಾಗಿ ನಡೆಯಬೇಕಾಗಿ ಪುಟ ಸಂಖ್ಯಾನ (pagination) ವನ್ನು ದರ್ಶಭಾಗವು ಕಳೆದ ಮೇಲೆ ಮತ್ತೆ ಆರಂಭಿಸಿದೆ. ಹೀಗೆ 108 ಪುಟಗಳು ಕಳೆದ ಬಳಿಕ ಮತ್ತೆ ಒಂದನೆಯ ಪುಟ.

ಭೇಧವು ಗೋಚರಿಸಲು ಈ ಮುಂದೆ 01, 02.... ಎಂದು ಪುಟಾಂಕನ ಮಾಡಿದೆ.

**ಆದರ್ಶ**

ಇಲ್ಲಿ ಸ್ಫುಟತೆಗಾಗಿ ಮೂರು ಪುರುಷಗಳನ್ನು ೧, ೨, ೩ ಎಂದು ಸೂಚಿಸಿದೆ. ವಚನಭೇದ ತೋರಿಸಲು ಅಲ್ಪ ವಿರಾಮ (comma)ಗಳನ್ನುಪಯೋಗಿಸಿದೆ. ರೂಪಬಾಹುಲ್ಯ (ಉದಾ : ಪರಸ್ಮೈಲೋಟ್ ೨-೧ರಲ್ಲಿ) ವನ್ನು '—' ಚಿಹ್ನೆಯಿಂದ ತೋರಿಸಿದೆ.

ಈ ಆದರ್ಶ ಭಾಗವನ್ನು ನಾಲ್ಕು ಭಾಗವಾಗಿ ನೋಡಬಹುದು :

**ಸುಲಭ ಗಣಗಳು**

I IV VI X ಗಣಗಳನ್ನು ಸರ್ವಧಾತುಕ ದೃಷ್ಟಿಯಿಂದ ಸುಲಭ ಗಣಗಳೆಂದು ಭಾವಿಸಬಹುದು. ಇವಕ್ಕೆ ಮಾದರಿಯಾಗಲೆಂದು ಭೂ, ಲಭ್ ಧಾತುಗಳನ್ನು ಪರಸ್ಮೈ ಆತ್ಮನೇ ರೂಪಗಳಿಗೆ ಕ್ರಮವಾಗಿ ಆರಿಸಿಕೊಂಡು ರೂಪಗಳನ್ನು ಕೊಡಲಾಗಿದೆ. ರೂಪಗಳನ್ನು ದಶಲಕಾರದಲ್ಲೂ ಇವೆರಡು ಧಾತುಗಳಿಗೆ ಸಂಪೂರ್ಣವಾಗಿ ಕೊಟ್ಟಿರುವ ಕಾರಣ, ಎಲ್ಲ ರೂಪಗಳ ಬಗ್ಗೆ ಒಂದು ಚಿತ್ರ (idea) ಮನಸ್ಸಿನಲ್ಲಿ ಮೂಡಬೇಕೆಂದು.

**ಅರ್ಧಧಾತುಕ ಲಕಾರಗಳು**

ಆಶೀರ್ಲಿಙ್, ಲುಟ್, ಲೃಟ್ ಮತ್ತು ಲೃಙ್‌ಗಳು ಸರಳ ಲಕಾರಗಳೇ ಸರಿ. ನಮ್ಮ ದರ್ಶಭಾಗದಲ್ಲಿಯೂ ಇವು ಒಟ್ಟಾಗಿಯೇ ಇರುವುದರ ಮತ್ತೂ ಒಂದು ಔಚಿತ್ಯವು ಇಲ್ಲಿ ತೋರುತ್ತದೆಯಷ್ಟೆ.

ಈ ನಾಲ್ಕಕ್ಕೂ ಸೇಟ್ ಮತ್ತು ಅನಿಟ್‌ಗಳಿಗೊಂದೊಂದರಂತೆ ಮಾದರಿಗಳನ್ನು ಕೊಟ್ಟಿದೆ. ಈ ಭಾಗವನ್ನು ಮುಂದಿನ ಮುದ್ರಣಗಳಲ್ಲಿ ಮತ್ತೂ ಪರಿಷ್ಕರಿಸುವ ಅಪೇಕ್ಷೆಯಿದೆ.

**ಸಾರ್ವಧಾತುಕ ಕ್ಲಿಷ್ಟ ಗಣಗಳು**

ಕ್ಲಿಷ್ಟಗಣಗಳೆಂದರೆ II III V VII VIII ಮತ್ತು IX. ಇವುಗ

ಕಲ್ಲಿಯು ಧಾತುಗಳು ಒಂದು ಮಾದರಿಯನ್ನನುಸರಿಸಿಯೇ ನಡೆದುಬರುವುವೆನ್ನು ವಂತಿಲ್ಲ. ಹೀಗಾಗಿ ಇವುಗಳಲ್ಲಿ ಯಾವುವು ವಿಶಿಷ್ಟರೂಪವಿಶಿಷ್ಟವೋ ಅಥವಾ ತಮ್ಮ ಗಣದ ಇತರ ಧಾತುಗಳಲ್ಲಿ ಕೆಲವಕ್ಕಾದರೂ ಮಾದರಿಯಾಗಬಲ್ಲವೋ ಅಂತಹವನ್ನು ಕೊಡಲಾಗಿದೆ. ಹಾಗೆ ಕೊಡುವಾಗ ಪರಸ್ಮೈ ಆತ್ಮನೇ ಉಭಯ-ಪದಿಗಳ ಕ್ರಮವನ್ನಿಟ್ಟುಕೊಂಡಿದೆ ಮತ್ತು ಇವುಗಳೊಳಗೂ ಧಾತು ಗಳನ್ನು ಅಕಾರಾದಿಯಾಗಿಯೇ ಕೊಟ್ಟುಕೊಂಡು ಬಂದಿದೆ. ಹೀಗೆ 2.231ರಲ್ಲಿ ಅದ್, ಅಸ್, (ಅ+)ಇ, ಜಾಗೃ, ನು-ಇತ್ಯಾದಿಗಳು ಅಕಾರಾದಿಯಾಗಿವೆ. ಈ ಭಾಗದಲ್ಲಿ ಕೆಲವು ಮುದ್ರಣ ಲೋಪ-ದೋಷಗಳು ಹೇಗೋ ಉಳಿದು ಬಿಟ್ಟವೆ. ಅವೆರಡನ್ನೂ ಅಮುಂದೆ ಸೂಚಿಸಿರುವಂತೆ ವಾಚಕರು ಪರಿಷ್ಕರಿಸಿ ಕೊಳ್ಳಬೇಕಾಗಿ ಪ್ರಾರ್ಥನೆ.

## ಆರ್ಧಧಾತುಕ-ಕ್ಲಿಷ್ಟ ಲಕಾರಗಳು

ಲಿಟ್ ಮತ್ತು ಲುಙ್—ಇವೇ ಈ ಎರಡು ಲಕಾರಗಳು. ದರ್ಶಭಾಗ ದಲ್ಲಿಯೂ ಇವನ್ನೇ ಕೊನೆಯಲ್ಲಿ 9) 10) ಎಂಬುದಾಗಿ ಕೊಟ್ಟಿದ್ದೇವಷ್ಟೆ. ಈ ಎರಡು ಲಕಾರಗಳಲ್ಲಿರುವಷ್ಟು ಜಟಿಲತೆ ಮತ್ತಿನ್ನಾವ ಅರ್ಧಧಾತುಕದಲ್ಲಾ ಗಲಿ, ಬೇರೆಡೆಯಲ್ಲಾಗಲಿ ಇಲ್ಲ. ಇವಕ್ಕಿರುವ ಮಾದರಿಗಳ ಸಂಖ್ಯೆ ಎಷ್ಟೆಂ ಬುದೇ ಇದಕ್ಕೆ ಸಾಕ್ಷಿ. (147 ಮಾದರಿಗಳು)! ಇವುಗಳಲ್ಲಿ ಕೆಲವನ್ನು ಕಡಿಮೆ ಮಾಡಬಹುದಾಗಿತ್ತಾದರೂ ಈ ಕ್ಲಿಷ್ಟಭಾಗದಲ್ಲಿ ಸ್ಫುಟತೆಗೆ ಭಂಗ ಬೇಡವೆಂದು ಆಶಿಸಿ ಹೀಗೆ ಮಾಡಿದೆ.

## ಕ್ರಮ

ಇಲ್ಲಂತೂ ಸಾಧ್ಯವೆನಿಸುವಷ್ಟೂ ಕ್ರಮವನ್ನು ರೂಪಿಸಿದೆ. ವಾಚಕರೇ ನಾದರೂ ಇನ್ನೂ ಪರಿಷ್ಕರಿಸುವ ಸಾಧ್ಯತೆಯನ್ನು ಸೂಚಿಸಿದಲ್ಲಿ ಗ್ರಂಥಕರ್ತನಿಗೆ ಅತ್ಯಂತ ಸಂತೋಷವೇ.

ಆದರೆ ಇಲ್ಲಿ ರೂಪಿಸಿರುವ ಕ್ರಮವು ವ್ಯಾಕರಣ ನಿಯಮಾನುಸಾರಿಯೆನ್ನು ವುದಕ್ಕಿಂತಲೂ ಸಾಧಾರಣ ವ್ಯಕ್ತಿಗೆ ಬಳಕೆಗೆ ಥಟ್ಟನೆ ಸಾಧ್ಯವಾಗುವಂತೆ ಮಾಡಿರುವುದೆಂದೇ ಹೇಳಬೇಕಾಗಿದೆ.

## ಸ್ವರಕ್ರಮ

ಇಲ್ಲಿ ಮೊಟ್ಟಮೊದಲು ಗೋಚರಿಸುವ ಕ್ರಮ ರೂಪಗಳಲ್ಲಿಯ ಸ್ವರಗಳದ್ದು. (ಧಾತುಗಳ ಸ್ವರಗಳನ್ನೇ ಇಲ್ಲಿ ಗಣಿಸಹೋಗಿಲ್ಲ—ಅಸೌಕರ್ಯದ ನಿಮಿತ್ತ) ಹೀಗಾಗಿ 309 ರಿಂದ 333ರ ಮಾದರಿ ಸಂಖ್ಯೆಗಳವರೆಗೂ ಅ-ಆ-ಬಗೆಯ ಕ್ರಮ (Pattern) ಇದೆ. ಇನ್ನು ಮುಂದೆ ಅ–ಅರ್, ಅಮೇಲೆ ಅ–ಸಂಯುಕ್ತಾಕ್ಷರ, ಅ–ಅಂ, ಅ–ಆಂ, ಎರಡೇ ಅಕ್ಷರಗಳು, ಸ್ವರಾದಿ ಧಾತುಗಳ ರೂಪಗಳು. ಆ ಬಳಿಕ ಇ–ಅ, ಇ–ಈ, ಇ-ಏ; ನಂತರ ಉ–ಅ, ಉ–ಊ, ಉ–ಓ ಹೀಗೆ.

## ಅನುಪ್ರಯೋಗ ಲಿಟ್

ಇದರ ಪರಸ್ಮೈಪದಿಯ ಮೂರೂ ಮಾದರಿಗಳನ್ನೂ ಬೇರೆ ಪ್ಯಾರಾದಲ್ಲಿ ಒಟ್ಟಿಗೆ ಕೊಡಲಾಗಿದೆ. ದರ್ಶಭಾಗದಲ್ಲೂ ಇವುಗಳ ಉಪಯೋಗವು ಒಟ್ಟಿಗೆ ನಡೆಯುವಂತಹುದೇ. ಅಂತೆಯೇ ಆತ್ಮನೇಪದಲ್ಲಿಯೂ.

## ರೂಪಬಾಹುಲ್ಯ ಕ್ರಮ

ಇಷ್ಟೇ ಅಲ್ಲ. 309ರಲ್ಲಿ ಅಧಿಕ ರೂಪವು ಒಂದೂ ಬಂದಿಲ್ಲ. 310ರಲ್ಲಿ ಚಕಾರ–ಚಕರ ಎಂದು ಒಂದು ಮಾತ್ರವಿದೆ. ಮುಂದೆ 317ರಲ್ಲಿ ಜಗಮಿಥ-ಜಗಂಥ, ಜಗಾಮ–ಜಗಮ ಎಂದು ಎರಡೆರಡು ಅಧಿಕ. ಮುಂದೆ 329ರಲ್ಲಿ ನಾಲ್ಕು ರೂಪಗಳು ಅಧಿಕ. 333ರಲ್ಲಿ 8 ರೂಪಗಳು ಅಧಿಕ! ಹೀಗೆ ಇಲ್ಲೂ ಆರೋಹಣ ಕ್ರಮ (ascending order) ಇದೆ.

## ಸನ್ನಿಕರ್ಷೇ ಭೇದ

ಇದಕ್ಕೆ ಉದಾ: 310 ಮತ್ತು 311ರಲ್ಲಿ ಪರಸ್ಪರವಿರುವಂತೆ. ಅಧಿಕ ರೂಪವೊಂದೇ ಆದರೂ ಒಂದರಂತೆ ಮತ್ತೊಂದಲ್ಲ. ಹೀಗಾಗಿ ಪರಸ್ಪರ ಸೂಕ್ಷ್ಮಭೇದವಿರುವುದನ್ನೂ ಪಕ್ಕಪಕ್ಕದಲ್ಲೇ ಕೊಟ್ಟಿರುವುದರಿಂದ ಬಳಕೆಯಲ್ಲಿ ಎಚ್ಚರ ತೆಗೆದುಕೊಳುವುದು ಸುಲಭ.

## ಉಪಲಕ್ಷಣ

ನಾವು ಮೇಲೆ ಹೇಳಿದುದು ಕೇವಲ ಉಪಲಕ್ಷಣ, ದಿಙ್ಮಾತ್ರ ದರ್ಶನ. ಆದರ್ಶದ ಭಾಗದಲ್ಲಾದ್ದಕ್ಕೂ ಈ ಕ್ರಮುವನ್ನನುಸರಿಸುವ ಎಚ್ಚರ ತೆಗೆದು ಕೊಂಡಿದೆ. ಧ್ವೇ, ಢ್ವೇಗಳು, ಧ್ವಂ, ಢ್ವಂಗಳು ಒಂದೊಂದೇ ಮತ್ತು ಒಟ್ಟಿಗೆ ಬರುವುದನ್ನೂ, ಇಡನುಸಾರ ವ್ಯತ್ಯಾಸಗಳನ್ನೂ, ಸರಳ ರೂಪಗಳಿಂದ ಕ್ಲಿಷ್ಟರೂಪಗಳೆಡೆಗೆ–ಎಂದು ಮುಂತಾಗಿ ಬಹುವಾಗಿ ಕ್ರಮುವನ್ನು ಒಳಗೊಳಗೇ ಇರಿಸಿದೆ. ಸೂಕ್ಷ್ಮೇಕ್ಷಿಕೆಯುಳ್ಳವರಿಗೆ ಇದು ಸ್ಫುಟವಾದೀತು.

## ಮಾದರಿಗಳು

ಅಂಶತೋ ಗತ್ವಾ, ಇಲ್ಲಿ ಕೊಟ್ಟಿರುವ ಸುಮಾರು 450 ಮಾದರಿಗಳೇ ಸಂಸ್ಕೃತದ 2000 ಧಾತುಗಳಿಗೂ, ಅವುಗಳ ಉಪಸರ್ಗಯೋಗ ಪ್ರಸಂಗಕ್ಕೂ, ಸನಾದ್ಯಂತ ರೂಪಗಳಲ್ಲಿಯೂ ದಶಲಕಾರಗಳಿಗೂ ಅನ್ವಯವಾಗುತ್ತವೆ.

ಮಾದರಿಗಳನ್ನು ಕೊಡುವಾಗಲೂ ಸೌಕರ್ಯಕ್ಕೆ ವಿಶೇಷವಾದ ಗಮನ ಕೊಡಲಾಗಿದೆ. ಏಕೆಂದರೆ, ಎಷ್ಟಾದರೂ ಮಾದರಿಗಳು ಕಂಠಪಾಠಕ್ಕೆ ಯೋಗ್ಯ ವಾದವುಗಳು.

ಹೀಗಾಗಿ ಸಾರ್ವಧಾತುಕದಲ್ಲಿ 'ಸ್ನಾ' ಬದಲು 'ಯಾ' ; ಅಡಾಗಮ ವಿದ್ದಾಗ ಭ್ರಮೆಗೆ ಅವಕಾಶವಾಗದಿರಲು ಸ್ವರಾದಿ ಧಾತುಗಳನ್ನು ಬಹುಮಟ್ಟಿಗೆ ಬಿಟ್ಟಿದೆ. ಆದ್ದರಿಂದ 'ಆನೀತ್' ಬದಲು 'ಅಶ್ವಸೀತ್'.

ಲಿಟ್‌ನಲ್ಲಿ 'ದುದ್ರೋಹ' ಬದಲು 'ಮುಮೋಹ' (ಮೊದಲನೆಯದು ಶ್ರುತಿಕಟು). 'ಚುಕ್ಷೋಭ' ಬದಲು 'ಚುಕೋಪ'; 'ಬಭ್ರಾಮ' ಬದಲು 'ಜಚಾರ'; 'ದಧ್ಮೌ' ಬದಲು 'ಜಗೌ'; 'ಅಚ್ಛೈತ್ಸೀತ್' ಬದಲು 'ಅವಾಕ್ಷೀತ್' 'ಅಸ್ರಾಕ್ಷೀತ್' ಬದಲು 'ಅಯಾಕ್ಷೀತ್'; 'ಅಶ್ಲಿಕ್ಷತ್' ಬದಲು 'ಅಗಮತ್'; 'ಅಖಿತ್ತ' ಬದಲು 'ಅವಿತ್ತ'. ಮತ್ತು ಸ್ಪಷ್ಟತೆಗೆಂದು 'ಚಿಚಾಯ' ಬದಲು 'ಚಿಕಾಯ' ಇ.

## ಉತ್ತರ ಪೀಠಿಕೆ

ಉತ್ತರಪೀಠಿಕೆಯು ವಿವರಣಾತ್ಮಕವಾದುದು. ಪೂರ್ವಪೀಠಿಕೆಯಲ್ಲಿ ಸೂತ್ರರೂಪವಾಗಿ ಹೇಳಿದ ಮಾತುಗಳಿಗೆ ಆಧಾರ, ಪುಷ್ಟಿ, ನಿದರ್ಶನ, ವಿಶ್ಲೇಷಣೆಗಳನ್ನು ಇಲ್ಲಿ ಕೊಡಲಾಗಿದೆ.

## ಟಿಪ್ಪಣಿಗಳು

ಇಲ್ಲಿ ಮುಖ್ಯವಾದುವುಗಳನ್ನು ಸಂಖ್ಯಾಯಿಸಿದೆ (numbered). ಮುಂದೆ ಬರುವ ಕಾರಿಕೆ, ಸೂತ್ರ, ಕೋಷ್ಟಕ, ಅನುಬಂಧಗಳಿಗೆ ಅಲ್ಲಿ ನಿರ್ದೇಶವಿದೆ. ಅವನ್ನೂ ಅನುಸರಿಸಿದರೆ ವಿಷಯವು ಮತ್ತೂ ಸ್ಪಷ್ಟವಾಗುವುದೆಂದು ಅಭಿಪ್ರಾಯ. ಉಪಸರ್ಗದಿಂದಾಗುವ ವಿಶೇಷಗಳು, ಸನಾದಿ-ನಾಮಧಾತುಗಳು, ಕೃದ್ರೂಪಗಳು-ಇವಕ್ಕೆ ಅಲ್ಲಿ ಹೇರಳವಾಗಿ ಉದಾ.ಗಳನ್ನು ಕೊಡಲಾಗಿದೆ.

## ಕಾರಿಕೆಗಳು

ಹಲವು ಮುಖ್ಯ ವಿಷಯಗಳನ್ನು ಚಿಕ್ಕದಾಗಿ ಚೊಕ್ಕವಾಗಿ ಇವು ನಿರೂಪಿಸುತ್ತವೆ. ಉದಾ: ಕಾ 6, 7, 16, 19ಇ. ಇವುಗಳಿಗೂ ಅರ್ಥವನ್ನು ಕೊಡುವ ಉದ್ದೇಶವಿತ್ತಾದರೂ ಈ ಮುದ್ರಣದಲ್ಲಿ ಆಗಲಿಲ್ಲ. ಮುಂದೆ ಮಾಡುತ್ತೇವೆ. ಈಗ ಬಿಟ್ಟಿರುವ ಇನ್ನೂ ಕೆಲವು ಕಾರಿಕೆಗಳನ್ನು ಆಗ ಸೇರಿಸುವ ಉದ್ದೇಶವಿದೆ.

ಟಿಪ್ಪಣಿಗಳಲ್ಲಿ ಹೇಗೋ ಹಾಗೆ ಇಲ್ಲಿಯೂ ಸಹ, ಪೂರ್ವಪೀಠಿಕೆಯ ಆಧಾರದ ಮೇರೆಗಲ್ಲದೆ, ಸ್ವತಂತ್ರವಾಗಿಯೂ ಇವುಗಳಿಂದ ವಿಷಯಗಳನ್ನು ಆಯ್ದುಕೊಳ್ಳಲು ಉಪಯುಕ್ತ ಶೀರ್ಷಿಕೆಗಳನ್ನು ಕೊಟ್ಟಿದೆ.

ಕಾರಿಕೆಗಳು ಕಂಠಪಾಠಕ್ಕೆ ಯೋಗ್ಯವಾಗಿವೆ.

## ಸೂತ್ರಗಳು

ರೂಪಗಳ ವ್ಯುತ್ಪತ್ತಿ, ನಿಷ್ಪಾದನಕ್ರಮಗಳ ಅರಿವಿಗೆ ಪಾಣಿನಿಕೃತ

ಅಷ್ಟಾಧ್ಯಾಯೀ ಸೂತ್ರಗಳು ಅತ್ಯುಪಯುಕ್ತ ಸಂದರ್ಭ ಉದಿಸಿದಂತೆಲ್ಲ ಅವನ್ನು ಕೊಡುವುದರ ಬದಲು, ಒಂದೇ ಕಡೆ ಕೊಟ್ಟಿರುವುದಕ್ಕೆ ಕಾರಣವಿದೆ. ಸೂತ್ರಗಳನ್ನು ಅಧ್ಯಾಯ-ಪಾದ-ಸೂತ್ರಗಳ ಕ್ರಮದಲ್ಲಿ ಕೊಟ್ಟಿದೆ. ಇದರಿಂದಾಗಿ ಸೂತ್ರಗಳ ಪೌರ್ವಾಪರ್ಯ, ಪರಸ್ಪರ ಸಂಬಂಧ, ಅಧಿಕಾರ, ಅನುವೃತ್ತಿಗಳನ್ನು ಅರಿಯಲು ಶಕ್ಯವಾಗುತ್ತದೆ. ಪ್ರಸಕ್ತ ಸೂತ್ರಗಳಿಗೆಲ್ಲ ಅರ್ಥವನ್ನು ಕೊಟ್ಟಿದೆ. ಅನುವೃತ್ತ್ಯರ್ಥಗಳನ್ನು ಸಾಧಾರಣವಾಗಿ ಎಲ್ಲಿಯೂ ಕೈಬಿಟ್ಟಿಲ್ಲ. ಯಾವ ಸೂತ್ರಾರ್ಥವೂ ಅಪೂರ್ಣವೆನಿಸದಂತೆ ಸಾಕಾಂಕ್ಷವೆನಿಸದಂತಾಗಲು ಯತ್ನಿಸಲಾಗಿದೆ. ಸೂತ್ರಗಳ ಅಕಾರಾದಿ ಕೊನೆಯಲ್ಲಿದೆ.

ಸೂತ್ರಗಳಲ್ಲಿ ಬಹು ಸೂತ್ರಗಳು 'ಪಠತಿ'ಯ ನಿಷ್ಪತ್ತಿಗಾಗಿ ಆರಿಸಿಕೊಂಡವು. ಈ ಒಂದರಿಂದ ಒಂದು ರೂಪದ ನಿಷ್ಪಾದನವು ಎಷ್ಟು ವ್ಯವಸ್ಥಿತವೆಂಬುದರ ಕಲ್ಪನೆಯುಂಟಾಗುತ್ತದೆ.

## ಅನುಬಂಧಗಳು

ಈ ಕಲ್ಪನೆಯಲ್ಲಿ ಇಪ್ಪತ್ತಕ್ಕೂ ಮೀರಿ ಅನುಬಂಧಗಳಿವೆ. ಇವಲ್ಲೂ ಹಲವು ಕೋಷ್ಟಕ ರೂಪಗಳಾಗಿವೆ.

ದಶಲಕಾರ ಪ್ರತ್ಯಯಗಳನ್ನು ಏಕತ್ರ ಕೊಟ್ಟಿರುವುದು ಬಹು ಪುಸ್ತಕಗಳಲ್ಲಿ ಕಾಣಸಿಗದು. ಇವುಗಳ ಒಂದು ಒಟ್ಟು ನೋಟವೇ ಒಂದು ಅನುಕೂಲ್ಯವನ್ನು ಕಲ್ಪಿಸುತ್ತದೆ. ವಿಶೇಷವಾಗಿ ಲುಙ್‌ಲಕಾರದಲ್ಲಿನ ಭೇದಪ್ರಭೇದಗಳನ್ನು ಗಮನಿಸಬಹುದು.

## ಲಕಾರಾರ್ಥ

ಅಲ್ಲಿಯೇ ಹೇಳಿರುವಂತೆ. ಇದು ತೀರ ವಿಸ್ತಾರವಾಗಿ ಬೇರೊಂದು ಪುಸ್ತಿಕೆಯಾಗಿಯೇ ಇದನ್ನು ತರಲಾಗಿದೆ.

## ಧಾತುಪಾಠ

ನಾವು ತೆಗೆದುಕೊಂಡಿರುವ 360 ಧಾತುಗಳಿಗೂ, ಪಾಣಿನೀಯ ಧಾತು

ಪಾಠವನ್ನು ಕೊಡಲಾಗಿದೆ. ಇಲ್ಲಿಯು ಅರ್ಥವತ್ತಾದ ಅನುಬಂಧಗಳನ್ನು ಪ್ರಯೋಜನಸಹಿತವಾಗಿ ಅರಿಯಬೇಕು.

ಸಾಧಾರಣವಾಗಿ ಇಲ್ಲಿಯೂ ಅಕಾರಾದಿ ಕ್ರಮವೇ ಇದೆ. ಆದರೆ ಧಾತ್ವಾದಿಗಳಲ್ಲಿಯ ಷತ್ವ-ಣತ್ವಗಳ ಬಗ್ಗೆ ವಾಚಕರ ಗಮನ ಅವಶ್ಯ. ಉದಾ: ನೋ. 167-175, 320-329.

ಇಲ್ಲಿಯೂ ಅನ್ವೇಷಣೆ ಶೀಘ್ರವಾಗಲೆಂದು ಪ್ರತಿ ಹತ್ತು ಧಾತುಗಳಿಗೆ ಒಂದು ಪ್ಯಾರಾನಂತೆ ಮಾಡಲಾಗಿದೆ.

### ಧಾತುಗಳ ಪಟ್ಟಿ

ದರ್ಶಭಾಗವನ್ನುಪಯೋಗಿಸುವವರಿಗೆ ಅಲ್ಲಿಯ ಅಕಾರಾದಿಯು ಅತ್ಯನುಕೂಲವೇ ಆದರೂ, ಗಣಶಃ ಧಾತುಗಳ ಒಂದು ನೋಟವೂ ಅವಶ್ಯ. ಆದಕ್ಕೇ ಆದನ್ನು ಕೊಟ್ಟಿದೆ. ಜೊತೆಗೆ ಮತ್ತೆ ಪದಾನುಸಾರ ಕೊಟ್ಟಿದೆ. ಇದೂ ಸಾಲದೆಂದು-ಮತ್ತೆಲ್ಲಿಯೂ ಇಲ್ಲದ ಒಂದು ಹೊಸ ಯೋಜನೆಯಿಂದ-ಸೇಟ್, ಅನಿಟ್, ವೇಟ್‌ಗಳೆಂಬ ವಿಭಾಗವನ್ನು ಮತ್ತೂ ಮಾಡಿಕೊಟ್ಟಿದೆ. ಉದ್ದೇಶ ಸ್ಪಷ್ಟ. ಪ್ರಯೋಜನ ಬಹುಲ.

### ಅಂಕಿ-ಅಂಶಗಳು

ಸಂಸ್ಕೃತದಲ್ಲಿನ ಒಟ್ಟು ಧಾತುಗಳು, ಅವುಗಳ ವಿಭಾಗ-ವಿಂಗಡಣೆಗಳು ಮತ್ತು ಈ ಕೃತಿಯಲ್ಲಿನ ಪರಿಸ್ಥಿತಿ, ಪರಸ್ಪರ ಹೋಲಿಕೆಗಳನ್ನರಿಯಲು ಕೋಷ್ಟಕಗಳನ್ನು ಕೊಟ್ಟಿದೆ. ಇಲ್ಲಿ ಗಮನಿಸಬಹುದಾದುದೆಂದರೆ ಪ್ರಥಮಗಣೀಯ ಧಾತುಗಳೇ ಒಟ್ಟು ಧಾತುಗಳಲ್ಲಿ ಅತಿ ಹೆಚ್ಚು (ಸುಮಾರು 50%). ತಥಾಪಿ ಪರಸ್ಮೈಪದಿಗಳೇ ಹೆಚ್ಚು.

ಹೀಗೆಯೇ ಮಾದರಿಗಳನ್ನು ಕುರಿತಾದ ಅಂಕಿ-ಅಂಶಗಳೂ, ವಿಶೇಷವಾಗಿ ಕಂಠಪಾಠ ಮಾಡಬೇಕಾಗಿರುವ ಮಾದರಿಗಳ ಒಂದು ಯೋಗ-ವಿಭಾಗವೂ ಇಲ್ಲಿ ದೊರೆತೀತು.

ಇನ್ನೊಂದೆರಡು ಅನುಬಂಧಗಳು ರೂಪಸಿಷ್ಟಾದನ ಕ್ರಮಕ್ಕೊಂದು ನಿದರ್ಶನ-ಹೆಜ್ಜೆಗಳಿಷ್ಟು, ಸೂತ್ರಗಳಿಷ್ಟು ಮುಂತಾದುವನ್ನು ಕೊಡುತ್ತವೆ. ಒಂದೊಂದು ರೂಪಗಳ ಹಿಂದೆಯೂ ಇಷ್ಟೊಂದು ಹೆಜ್ಜೆಗಳಿದ್ದು ಕೊಂಡೇ ಅದೆಷ್ಟು ರೂಪಗಳು ಲಭ್ಯ !

**ಅಕಾರಾದಿಗಳು**

'ಕ್ಲಿಷ್ಟಗಣಗಳ ಧಾತು'ಗಳು 'ಸಮಾನಧಾತು'ಗಳು ಉಪಸರ್ಗ-ಉಪಪದಗಳು, ಕಾರಿಕೆ-ಸೂತ್ರಗಳು-ಇತ್ಯಾದಿಗಳಿಗೆಲ್ಲಾ ಅಕಾರಾದಿಯನ್ನು ಕೊಡಲಾಗಿದೆ. ಗ್ರಂಥದ ಬಳಕೆಗೆ ಇವು ಉಪಕಾರಿಯಾಷ್ಟು.

**ಗ್ರಂಥಸೂಚಿ**

ಇಲ್ಲಿ ಕೊಟ್ಟಿರುವ ಸುಮಾರು ಎಲ್ಲ ಗ್ರಂಥಗಳನ್ನೂ ಅಲ್ಲಿಯ ಸೌಕರ್ಯಾಸೌಕರ್ಯಗಳನ್ನೂ ಪರಿಶೀಲಿಸಿ ಈ ಪುಸ್ತಕವನ್ನು ಸಿದ್ಧಪಡಿಸಿದೆ. ಇಲ್ಲಿಲ್ಲದ ಧಾತುಗಳು, ಅನ್ಯರೂಪಗಳು (ಕರ್ಮಣಿ ಇ) ಅಲ್ಲಿ ಕೆಲವಲ್ಲಿ ಲಭ್ಯ.

ಕೊನೆಯದಾಗಿ ಸಂಕ್ಷೇಪಗಳ ಬಳಕೆ ಸುಗಮವಾಗಲೆಂದು ಮತ್ತೊಮ್ಮೆ ಅವನ್ನು ಕೊಟ್ಟಿದೆ_ಅಕಾರಾದಿಯಾಗಿ.

**ಲೋಪ-ದೋಷಗಳು**

ಪುಸ್ತಕವು ಮುಗಿಯುವುದರೊಳಗೆ ಹಲವಾರು ಕಾರಣಗಳಿಂದ ಒಂದಕ್ಕಿಂತ ಹೆಚ್ಚು ಮುದ್ರಣಾಲಯಗಳನ್ನು ಕಾಣಬೇಕಾಗಿ ಬಂದು ಪ್ರೂಫುಗಳೆಲ್ಲವನ್ನೂ ಸಮಗ್ರವಾಗಿ ಒಬ್ಬರೇ ನೋಡಲಾಗದೆ ಹಲಕೆಲವು ದೋಷಗಳುಳಿದುಕೊಂಡಿವೆ. ಇಂತಹ ಪುಸ್ತಕದಲ್ಲಿ ಹೀಗೆ ದೋಷಗಳುಳಿದುಕೊಂಡಿವೆ. ಇಂತಹ ಪುಸ್ತಕದಲ್ಲಿ ಹೀಗೆ ದೋಷಗಳು ಬರಲೇಬಾರದೆಂಬ ಆಗ್ರಹವು ಗ್ರಂಥಕರ್ತನಿಗಿದ್ದರೂ ಹೀಗಾಗಿ ಹೋಯಿತು. ಇದಕ್ಕೆ ವಾಚಕರ ವಿಮರ್ಶಕರ ಕ್ಷಮೆಯಿರಲಿ.

ಎಲ್ಲರಂತೆ ಶುದ್ಧಾಶುದ್ಧಪತ್ರಿಕೆಯನ್ನು ಕೊನೆಯಲ್ಲಿ ಹಾಕಲಿಲ್ಲ. ಕಾರಣ,

ಅನೇಕ ವೇಳೆ ಕೊನೆಯ ಪುಟಗಳು ಬೇಗನೇ ಹರಿದು ಹೋಗುವ ಸಂಭವವೇ ಹೆಚ್ಚು. ಇದು ಮುಖ್ಯವಾದ್ದರಿಂದ ಉಳಿದಿರಬೇಕಲ್ಲವೆ?

ಆದರೂ ಓದುಗರಲ್ಲೊಂದು ಪ್ರಾರ್ಥನೆ. ಲೋಪ-ದೋಷಗಳನ್ನು ಬೇರೆ ಬೇರೆಯಾಗಿ ಕೊಟ್ಟಿದ್ದೇವೆ. ವಾಚಕರು ಮೊಟ್ಟಮೊದಲು ದೋಷಗಳನ್ನೆಲ್ಲ ಸರಿಪಡಿಸಿಕೊಂಡು ಬಿಡಬೇಕು-ಕೊಂಡಂದೇ ! ಲೋಪಗಳನ್ನು ಆಮೇಲೆ ಸೇರಿಸಿಕೊಂಡರೂ ನಡೆದೀತು.

ಆದರೆ ಮುಂದಿನ ಮುದ್ರಣಗಳಲ್ಲಿ ಒಂದೇ ಒಂದು ದೋಷವೂ ಉಳಿಯದಂತೆ ಕೈಲಾದಷ್ಟೂ ಯತ್ನಿಸುತ್ತೇವೆ (ಪ್ರಾರಂಭಿಕ ಪುಟಗಳಲ್ಲೂ ಪುಟಸಂಖ್ಯೆಯಲ್ಲಿ ಒಂದು ಸಣ್ಣ ಅಚಾತುರ್ಯವಾಗಿಬಿಟ್ಟಿದೆ.)

**ಅಭಿಪ್ರಾಯ**

ನಮ್ಮ ಮೊದಲನೆಯ ಪ್ರಕಟಣೆಯನ್ನು ಕುರಿತು ಕೆಲವು ಪರಿಣತ ವಿದ್ವಾಂಸರ ಅಭಿಪ್ರಾಯಗಳ ಸಂಗ್ರಹವಿಲ್ಲಿದೆ.

**ಸಂಖ್ಯಾನ ಇ.**

ಅಧ್ಯಾಯ ಸಂಖ್ಯಾನದ ಬಗೆಗೊಂದು ಮಾತು. ಪ್ರಸಿದ್ಧ ಮತ್ತು ಪಾರಿಭಾಷಿಕ ಕ್ರಮವನ್ನಿದು ಅನುಸರಿಸಿದೆ. ಷಿಕಾಗೋ ಪ್ರಕಟಣೆ 'ಮ್ಯಾನ್ಯುಯಲ್ ಆಫ್ ಸ್ಟೈಲ್'' ಕ್ರಮಗಳನ್ನು (ಒಂದೆರಡು ಕಡೆ ಮತ್ತೂ ಪರಿಷ್ಕಾರದೊಡನೆ) ಬಹುವಾಗಿ ಬಳಸಿದೆ.

**ಪುಟಾಂಕನಗಳು**

ಪ್ರತಿ ಪುಟದಲ್ಲೂ ಕೃತಿಯ ಹೆಸರಿನೊಂದಿಗೆ ಇನ್ನೂ ಕೆಲ ಅಂಶಗಳಿವೆ. ಪುಟಸಂಖ್ಯೆಯು ಅಡಿಯಲ್ಲಿ ಬಲಗಡೆ ಇರುವುದನ್ನು ನೋಡಬಹುದು.

ದರ್ಶಭಾಗದಲ್ಲಿ ಧಾತುಗಳ ಅಕಾರಾದಿಯನ್ನು ಸವ್ಯಾಪ್ತಿಯಾಗಿ ಪುಟದ ಮೇಲ್ಭಾಗದಲ್ಲಿ ಕೋಶ (dictionary) ಗಳಲ್ಲಿ ಕೊಡುವಂತೆ ಕೊಟ್ಟಿದೆ. ಉದಾ: ಜಿ²-ಜೃಂಭ್.

ಆದರ್ಶಭಾಗದಲ್ಲಿ ಗಣ–ಪದ ನಿರ್ದೇಶ, ಲಕಾರ ನಿರ್ದೇಶಗಳನ್ನು ಅಲ್ಲಲ್ಲಿ ಕಾಣಬಹುದು. ಎಲ್ಲ ಪುಟಗಳಲ್ಲೂ ಮಾದರಿ ಸಂಖ್ಯೆಗಳ ವ್ಯಾಪ್ತಿಯನ್ನು 60–70, 404–412 ಎಂಬಂತೆ ಸೂಚಿಸಿದೆ.

ಉತ್ತರಪೀಠಿಕೆಯಲ್ಲಿ ಶೀರ್ಷಿಕಾಸಂಗ್ರಹ, ಅಧ್ಯಾಯ ಸಂಖ್ಯೆ: ಉದಾ: '3.503 ಅನು: ಧಾತುಪಾಠ' ಇತ್ಯಾದಿಯಾಗಿ ಕೊಟ್ಟಿದೆ.

## ಕೊನೆಯ ಮಾತು

ಇನ್ನೂ ಒಂದೆರಡು ವಿಶೇಷಗಳಿವೆಯಾದರೂ ಅವನ್ನು ಇಲ್ಲಿ ನಿರ್ದೇಶಿಸ ಹೋಗಿಲ್ಲ. ಒಟ್ಟಿನಲ್ಲಿ ಪುಸ್ತಕವನ್ನು ಆದಷ್ಟೂ ವ್ಯವಸ್ಥಿತವಾಗಿ ಕ್ರಮಬದ್ಧವಾಗಿ ರಚಿಸಲು ಸರ್ವ ಪ್ರಕಾರದಿಂದಲೂ ಯತ್ನಿಸಿದೆ. ಮತ್ತೂ ಪರಿಷ್ಕಾರ ಮಾಡುವ ಸಾಧ್ಯತೆಯಿದ್ದಲ್ಲಿ ಸೂಚನೆಗಳಿಗೆ ಸುಸ್ವಾಗತ.

# 0.10 ವಿಸ್ತೃತ ವಿಷಯ ಸೂಚಿ



---

*ಕಂಸದಲ್ಲಿ ಕೊಟ್ಟಿರುವ ಸಂಖ್ಯೆಗಳು ಮಾದರಿ ಸಂಖ್ಯೆಗಳು

# 1

# ಪೂರ್ವಪೀಠಿಕೆ

## ಧಾತು : ಪರಿಚಯದ ಮಾತು

ಕ್ರಿಯಾವಚನವೇ **ಧಾತು**[1]. ಕ್ರಿಯಾಪದಕ್ಕೆ ಇದುವೆ **ಪ್ರಕೃತಿ**[2] ಕ್ರಿಯಾಪದವಾಗಲು ಇದಕ್ಕೆ ಸೇರುವ **ಪ್ರತ್ಯಯ**ಗಳು ಎರಡು ತೆರನಾಗಿವೆ: **ವಿಕರಣ, ಆಖ್ಯಾತ** ಎಂಬುದಾಗಿ.

ಸಂಸ್ಕೃತದಲ್ಲಿರುವ ಸುಮಾರು 2000 ಧಾತುಗಳನ್ನು 'ಭ್ವಾದಿ' ಮೊದಲಾದ ಹತ್ತು ಗಣಗಳಾಗಿ ವಿಭಜಿಸಲಾಗಿದೆ[3]. (ಕೆಲವೆರಡು ಧಾತುಗಳು ರೂಪಭೇದ – ಅರ್ಥಭೇದಗಳನ್ನನುಸರಿಸಿ ಅನೇಕ ಗಣಗಳಲ್ಲಿ ಪಠಿತವಾಗಿರುವುದೂ ಉಂಟು)[4]. ಒಂದೊಂದು ಗಣಕ್ಕೆ ಬೇರೆ ಬೇರೆ ವಿಕರಣ ಪ್ರತ್ಯಯವುಂಟು[5]. (ಇವೇ ಅಲ್ಲದೆ ಈ ಧಾತುಗಳಿಂದಲೇ ಉಂಟಾಗುವ **ಸನಾದಿಗಳೂ** ಧಾತುಗಳೇ ಎನಿಸುತ್ತವೆ.)[6]

ಧಾತುಗಳು ಬೇರೆ ಬೇರೆ ಕಾಲ–ಭಾವಗಳಲ್ಲಿ ಬೇರೆ ಬೇರೆ ರೂಪಗಳನ್ನು ಹೊಂದುತ್ತವೆ. ಈ ಕಾಲ–ಭಾವಗಳೆರಡಕ್ಕೂ **ಲಕಾರ**ಗಳೆಂದು ಸಾಧಾರಣ (common) ವಾದ ಹೆಸರು. ಇವು ಒಟ್ಟು ಹತ್ತು[7]. ಇವುಗಳಲ್ಲಿ ಲಟ್, ಲಙ್, ಲೋಟ್ ಹಾಗೂ ವಿಧಿಲಿಙ್–ಇವುಗಳಿಗೆ **ಸಾರ್ವಧಾತುಕ** ಲಕಾರಗಳೆಂದೂ ಉಳಿದ ಆರಕ್ಕೆ **ಆರ್ಧಧಾತುಕ**ಗಳೆಂದೂ ಹೆಸರು.[8] (ಸಾರ್ವಧಾತುಕ ಲಕಾರಗಳಲ್ಲಿ ರೂಪಗಳನ್ನು ಕರ್ತರಿ ಪ್ರಯೋಗದಲ್ಲಿ ಪಡೆಯಲು ಗಣಾನುಸಾರ ವಿಕರಣಪ್ರತ್ಯಯಗಳನ್ನು ಮೊದಲು ಸೇರಿಸತಕ್ಕದ್ದು) ಲಕಾರಗಳ ಸಮುಚಿತವಾದ ಬಳಕೆಯನ್ನು ಅರಿಯುವುದು ಆವಶ್ಯಕ[9].

ಲಕಾರಗಳ ಪ್ರತ್ಯಯಗಳೇ ಆಖ್ಯಾತ ಪ್ರತ್ಯಯಗಳು. ಇವು ಪುರುಷತ್ರಯ ವಚನತ್ರಯಗಳಲ್ಲಿರುತ್ತವೆ[10]. ಇವುಗಳಲ್ಲಿ ಎರಡು ಬಗೆ- ಪರಸ್ಮೈ, ಆತ್ಮನೇ ಎಂಬುದಾಗಿ[11]. ಕೆಲವು ಧಾತುಗಳಿಗೆ ಪರಸ್ಮೈ ಪ್ರತ್ಯಯಗಳು ಮಾತ್ರ ಸೇರುತ್ತವೆ. ಅವನ್ನು ಪರಸ್ಮೈಪದಿ ಧಾತುಗಳೆಂದೂ ಆತ್ಮನೇ ಪ್ರತ್ಯಯಗಳೇ

ಸೇರುವ ಧಾತುಗಳನ್ನು ಆತ್ಮನೇಪದಿಯೆಂದೂ, ಆ ಎರಡೂ ಸೇರುವ ಧಾತುಗಳಿಗೆ ಉಭಯಪದಿ ಧಾತುಗಳೆಂದೂ ಹೇಳಲಾಗುತ್ತದೆ.[12]

ಆರ್ಧಧಾತುಕ ಲಕಾರ ಪ್ರತ್ಯಯಗಳನ್ನು ಸೇರಿಸುವ ಮೊದಲು ಕೆಲವು ಧಾತುಗಳಿಗೆ ಇಕಾರವನ್ನು ಸೇರಿಸಬೇಕಾಗುತ್ತದೆ. ಇದಕ್ಕೆ ಇಡಾಗಮವೆಂದು ಹೆಸರು. ಅದನ್ನು ಹೊಂದುವ ಧಾತುಗಳಿಗೆ ಸೇಟ್ ಧಾತುಗಳೆಂದು ಹೆಸರು. ಅದನ್ನು ಹೊಂದದ ಧಾತುಗಳಿಗೆ ಅನಿಟ್ ಎಂದೂ, ಯಾವ ಧಾತುಗಳಿಗೆ ಎರಡೂ ಬಗೆಯೂ ಉಂಟೋ ಅವಕ್ಕೆ ವೇಟ್ ಎಂದೂ ಹೆಸರು. ಇವನ್ನೇ ಕ್ರಮವಾಗಿ ಸೇಟ್ಕ, ಅನಿಟ್ಕ, ವೇಟ್ಕ ಎಂಬುದಾಗಿ ಕರೆಯಲಾಗುತ್ತದೆ[13]. (ಸಂಸ್ಕೃತ ವ್ಯಾಕರಣದ ಕಷ್ಟಗಳಲ್ಲಿ ಇದನ್ನರಿತು ಬಳಸುವುದೆ ಕಷ್ಟತಮವೆನ್ನುವಂತಿದೆ)[14]. ಇಡಾಗಮವು ಲಕಾರ ಪ್ರತ್ಯಯಗಳನ್ನು ಅನುಸರಿಸುವುದೂ ಉಂಟು[15]. ಅಂತೂ ಧಾತುರೂಪನಿಷ್ಪತ್ತಿಯು ಸಂಸ್ಕೃತದಲ್ಲಿ ಅತ್ಯಂತ ಕ್ರಮಬದ್ಧವಾಗಿದ್ದು ಪಾಣಿನೀಯಸೂತ್ರ ನಿಯಮಾನುಸಾರ ಆಗುತ್ತದೆ[16]

ಕರ್ಮಪದದ ಆಕಾಂಕ್ಷೆಯನ್ನು ಹೊಂದಿರುವ ಧಾತುವಿಗೆ ಸಕರ್ಮಕವೆಂದೂ[17], (ಎರಡು ಕರ್ಮಪದಗಳು ಬರುವಂತಿದ್ದರೆ ದ್ವಿಕರ್ಮಕವೆಂದೂ[18]), ಆದಿಲ್ಲದೆಯೇ ಇದ್ದರೆ ಅಕರ್ಮಕವೆಂದೂ[19] ಹೇಳಲಾಗುತ್ತದೆ. ಮೊದಲನೆಯ, ಬಗೆಯ ಧಾತುಗಳಿಗೆ ಕರ್ತರಿ[20] ಹಾಗೂ ಕರ್ಮಣಿ[21] ಪ್ರಯೋಗಗಳಿರುತ್ತವೆ. ಎರಡನೆಯ ಬಗೆಗೆ ಕರ್ತರಿ ಹಾಗೂ ಭಾವೇ[22] ಪ್ರಯೋಗಗಳಿರುತ್ತವೆ.

ಧಾತುವಿನಿಂದ ಬಗೆಬಗೆಯ ಅರ್ಥಗಳನ್ನು ಹೊಮ್ಮಿಸಲು ಉಪಸರ್ಗಗಳನ್ನು ಧಾತುವಿಗೆ ಮೊದಲು ಸೇರಿಸುವುದುಂಟು[23]. ಉಪಸರ್ಗಗಳಿಂದ ಧಾತುವಿನ ಅರ್ಥವು ಬಾಧಿತವಾಗಬಹುದು, ಅನುವೃತ್ತವಾಗಬಹುದು ಹಾಗೂ ವಿಶಿಷ್ಟವಾಗಬಹುದು[24]. (ಇವಲ್ಲದೇ ನಾಲ್ಕನೆಯ ಪ್ರಕಾರವೂ ಉಂಟೆಂದು ಕೆಲವರ ಮತ)[25]. ಧಾತುವಿನ ಪದವು ಸಹ ಕೆಲವೊಮ್ಮೆ ಉಪಸರ್ಗಗಳಿಂದಾಗಿ ಬದಲಾಗುವುದುಂಟು[26].

ಉಪಸರ್ಗಗಳು ಮಾಡುವ ಕೆಲಸವನ್ನು ಕೆಲವೊಮ್ಮೆ ಉಪಪದ

(ಗತಿ)ಗಳು ಮಾಡುವುದೂ ಉಂಟು[27]. ಧಾತುಗಳಿಗೆ ಉಪಸರ್ಗ/ಉಪಪದ-ಯೋಗವಿರುವಾಗ ಲಙಾದಿಲಕಾರಗಳಲ್ಲಿನ ರೂಪಗಳ ಬಗೆಗೆ ಎಚ್ಚರ ವಹಿಸ ಬೇಕು[28]. ಉಪಸರ್ಗ ಉಪಪದ ಹಾಗೂ ಧಾತು-ಇವೆರಡರ ನಡುವಣ ಸಂಧಿ ಕಾರ್ಯವು ನಿತ್ಯವಾದುದು[29]. ಅದರ ಸಾಧಾರಣ-ವಿಶೇಷ ನಿಯಮಗಳ ಅರಿವು ಅತ್ಯವಶ್ಯ[30] ಸೋಪಸರ್ಗ ಧಾತುಗಳ ಬಳಕೆಯನ್ನು ಕುರಿತಾಗಿಯೂ ಕಾರಕ ಪ್ರಕರಣದ ಅಧ್ಯಯನವೂ ಅವಶ್ಯವೆನಿಸುತ್ತದೆ.

ಭಾಷೆಯ ವಿಶಿಷ್ಟ ಬಳಕೆ (idiomatic usage) ಗಳಿಂದಾಗಿಯೇ ಕೆಲವೊಮ್ಮೆ ಅರ್ಥದೊಂದಿಗೆ ಪದವ್ಯತ್ಯಾಸವೂ (ಉಪಸರ್ಗಗಳಿಲ್ಲದಾಗಲೂ ಆಗುವುದುಂಟು)[32]. ಸನಾದಿಗಳಲ್ಲಿಯೂ ದಶಲಕಾರಗಳಲ್ಲಿ ರೂಪಗಳು ಉಂಟಾಗುತ್ತವೆ[33].

ಧಾತುಗಳ ರೂಪಗಳಿಗೆ ಸಂಬಂಧಿಸಿದಂತೆ ದ್ವಿತ್ವ ಪ್ರಕರಣ ಮುಂತಾದುವುಗಳ ಪರಿಚಯವೂ ಅವಶ್ಯ[34].

ಧಾತುಗಳಿಗೆ ಆಖ್ಯಾತ ಪ್ರತ್ಯಯಗಳಲ್ಲದೆ, ಕೃತ್ ಎಂಬ ಪ್ರತ್ಯಯಗಳೂ, ಸೇರುವುದುಂಟು[35]. ಬಗೆಬಗೆಯ ಕೃತ್ ಮುಂತಾದ ರೂಪಗಳಿಂದಾಗಿ ಸಂಸ್ಕೃತದ ಶಬ್ದ ಭಾಂಡಾರವು ಶಬ್ದವೈಪುಲ್ಯದಿಂದ ಕೂಡಿದೆ.

# 2.1

# ಧಾತು ರೂಪ ಕೋಶಃ

**1 ಅಂಚ್** I ಪ.ಸಕ.ಸೇ.
ಬಾಗು, ಹೋಗು, ಸತ್ಕರಿಸು

1) ಅಂಚತಿ 1
2) ಆಂಚತ್ 2
3) ಅಂಚತು 3
4) ಆಂಚೀತ್ 4
5) ಅಂಚ್ಯಾತ್ 5
   ಅಚ್ಯಾತ್ 5
6) ಅಂಚಿತಾ 6
7) ಅಂಚಿಷ್ಯತಿ 7
8) ಆಂಚಿಷ್ಯತ್ 8
9) ಆನಂಚ 351
10) ಆಂಚೀತ್ 416

**2 ಅಂಜ್** VII ಪ.ಸಕ.ವೇ.
ಲೇಪಿಸು

1) ಅನಕ್ತಿ 249
2) ಆನಕ್ 250
3) ಅನಕ್ತು 251
4) ಆಂಜ್ಯಾತ್ 252
5) ಅಜ್ಯಾತ್ 5
6) ಅಂಜಿತಾ 6
   ಅಂಕ್ತಾ 6
7) ಅಂಜಿಷ್ಯತಿ 7
   ಅಂಕ್ಷ್ಯತಿ 7
8) ಆಂಜಿಷ್ಯತ್ 8
   ಆಂಕ್ಷ್ಯತ್ 8
9) ಆನಂಜ 352
10) ಆಂಜೀತ್ 416

**3 ಅಟ್** I ಪ.ಸಕ.ಸೇ.
ತಿರುಗಾಡು, ಅಲೆ

1) ಅಟತಿ 1
2) ಆಟತ್ 2
3) ಅಟತು 3
4) ಆಟೀತ್ 4
5) ಅಟ್ಯಾತ್ 5
6) ಅಟಿತಾ 6
7) ಅಟಿಷ್ಯತಿ 7
8) ಆಟಿಷ್ಯತ್ 8
9) ಆಟ 350
10) ಆಟೀತ್ 416

**4 ಅದ್** II ಪ.ಸಕ.ಅ.
ತಿನ್ನು

1) ಅತ್ತಿ 37
2) ಆದತ್ 38
3) ಅತ್ತು 39
4) ಅದ್ಯಾತ್ 40
5) ಅದ್ಯಾತ್ 5
6) ಅತ್ತಾ 6

7) ಅತ್ಸ್ಯತಿ 7
8) ಆತ್ಸ್ಯತ್ 8
9) ಆದ 350
**ಜಘಾಸ** 200
10) ಅಘಸತ್ 413

**5 ಅನ್** II ಪ.ಅಕ.ಸೇ.
ಸಾಧಾರಣವಾಗಿ 'ಪ್ರ'–ಉಪಸರ್ಗ-ಪೂರ್ವಕವಾಗಿರುತ್ತದೆ.
ಉಸಿರಾಡು, ಜೀವಿಸು

1) ಅನಿತಿ 83
2) ಆನೀತ್ 84
3) ಅನಿತು 85
4) ಅನ್ಯಾತ್ 86
5) ಅನ್ಯಾತ್ 5
6)ಅನಿತಾ 6
7) ಅನಿಷ್ಯತಿ 7
8) ಆನಿಷ್ಯತ್ 8
9) ಆನ 350
10) ಆನೀತ್ 416

**6 ಅಯ್** I ಆ. ಸಕ.ಸೇ,
ಹೋಗು

1) ಅಯತೇ 11
2) ಆಯತ 12
3) ಅಯತಾಂ 13
4) ಅಯೇತ 14
5) ಅಯಿಷೀಷ್ಟ 24
6) ಅಯಿತಾ 28
7) ಅಯಿಷ್ಯತೇ 32
8) ಆಯಿಷ್ಯತ 36
9) ಅಯಾಂಚಕ್ರೇ ಇ. 410, 411, 412
10) ಆಯಿಷ್ಟ 453

**7 ಅರ್ಚ್** I ಪ. ಅಕ.ಸೇ.
ಪೂಜೆಮಾಡು, ಸತ್ಕರಿಸು

1) ಅರ್ಚತಿ 1
2) ಆರ್ಚತ್ 2
3) ಅರ್ಚತು 3
4) ಅರ್ಚೇತ್ 4
5) ಅರ್ಚ್ಯಾತ್ 5
6) ಅರ್ಚಿತಾ 6
7) ಅರ್ಚಿಷ್ಯತಿ 7
8) ಆರ್ಚಿಷ್ಯತ್ 8
9) **ಆನರ್ಚ** 351
10) ಆರ್ಚೀತ್ 416

**8 ಅರ್ಜ್** I ಪ.ಸಕ.ಸೇ.
ಸಂಪಾದಿಸು

1) ಅರ್ಜತಿ 1
2) ಆರ್ಜತ್ 2

3) ಅರ್ಜತು 3
4) ಆರ್ಜೀತ್ 4
5) ಅರ್ಜ್ಯಾತ್ 5
6) ಅರ್ಜಿತಾ 6
7) ಅರ್ಜಿಷ್ಯತಿ 7
8) ಆರ್ಜಿಷ್ಯತ್ 8
9) ಆನರ್ಜ 351
10) ಆರ್ಜೀತ್ 416

9 **ಅರ್ಥ್** X ಆ.ದ್ವಿಕ.ಸೇ.
ಬೇಡು, ಯಾಚಿಸು, ಆಸೆಪಡು

1) ಅರ್ಥಯತೇ 11
2) ಆರ್ಥಯತ 12
3) ಅರ್ಥಯತಾಂ 13
4) ಅರ್ಥಯೇತ 14
5) ಅರ್ಥಯಿಷೀಷ್ಟ 24
6) ಅರ್ಥಯಿತಾ 28
7) ಅರ್ಥಯಿಷ್ಯತೇ 32
8) ಆರ್ಥಯಿಷ್ಯತ 36
9) ಅರ್ಥಯಾಂಚಕ್ರೇ ಇ. 410 411 412
10) ಆರ್ತಿಥತ 432

10 **ಅರ್ಹ್** I ಪ.ಸಕ.ಸೇ.
ಯೋಗ್ಯನಿರು, ಪಾತ್ರನಾಗು, ಸಮರ್ಥನಾಗು

1) ಅರ್ಹತಿ 1
2) ಆರ್ಹತ್ 2
3) ಅರ್ಹತು 3
4) ಅರ್ಹೇತ್ 4
5) ಅರ್ಹ್ಯಾತ್ 5
6) ಅರ್ಹಿತಾ 6
7) ಅರ್ಹಿಷ್ಯತೇ 7
8) ಆರ್ಹಿಷ್ಯತ 8
9) ಆನರ್ಹ 9
10) ಆರ್ಹೀತ್ 416

11 **ಅವ್** I ಪ.ಸಕ.ಸೇ.
ಕಾಪಾಡು

1) ಅವತಿ 1
2) ಆವತ್ 2
3) ಅವತು 3
4) ಅವೇತ್ 4
5) ಅವ್ಯಾತ್ 5
6) ಅವಿತಾ 6
7) ಅವಿಷ್ಯತಿ 7
8) ಆವಿಷ್ಯತ್ 8
9) ಆವ 350
10) ಆವೀತ್ 416

12 V **ಅಶ್**1 ಆ.ಸಕ.ಸೇ
ವ್ಯಾಪಿಸು, ಹೊಂದು, ಅನುಭವಿಸು

